# ಇಂದೂತ್ವವನ್ನು ಕಾಪಾಡೋಣ



ನಾಗರ ಹಾವು (ಗಂಡು)

**ಇಂದೂ**



ನಾಗರ ಹಾವು (ಹೆಣ್ಣು)

**ಹಿಂದೂ**


ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org





# ಇಂದೂತ್ವವನ್ನು ಕಾಪಾಡೋಣ


<u>ರಚಿತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**

---






<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 70/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು-ಪಾದರಸಮು.
05. ಯುಗಮು-ಯೋಗಮು.
06. ನೈಜಂ-ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ-ಸೈತ್ಯಂ.
09. ಶೈವಮು-ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ-ಸೃಷ್ಠಿಕರ್ತ.
12. ಕಾಯ-ಪಂಡು-ಕಾಯ.
13. ಜ್ಞಾನಮು-ವಿಜ್ಞಾನಮು.
14. ವಾರ-ಮಾಸ-ವತ್ಸರ.
15. ಸೇಕೂವಲಿ-ಕೂಲಿಸೇವಾ.
16. ಧರ್ಮಮು-ಅಧರ್ಮಮು.
17. ಏಕ್‌ನಿರಂಜನ್-ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ-ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು - ಆರ್ಯುಲು.
22. ಪ್ರಭುವು - ಪ್ರಭುತ್ವಂ.
23. ಭೂತಂ - ಮಹಾಭೂತಂ.
24. ಪ್ರಭು - ಪ್ರಜ.
25. ಯಾದವ್.
26. ಪುಸ್ತಕಮು-ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ-ವಿಕೃತಿ.
29. ಮಾಟ-ಮಂದು.
30. ಏಕತ-ಏಕಾಗ್ರತ.
31. ಹರಿಕಾಲು-ಹರಿಚೇಯಿ.
32. ಪುಟ್ಟಗೋಸಿ-ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ-ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು-
ಅಮಾಯಕುಡು.
37. ಮರಣಮು-ಶರೀರಮು.
38. ದ್ವಿತೀಯುಡು-ದ್ವಿತೀಯುಡು.
39. ಎದಮೀದಮುದ್ರ-
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ-
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ-
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು-
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ -
ಗುರುವು ದೈವಮು.
48. ಕಲಿಯುಗಮು.
49. ಮತಮು-ಪಥಮು.
50. ದಿವ್ಯಖುರಾನ್-ಹದೀಸು.
51. ತಲ್ಲಿ.
52. ಪುಟ್ಟುಟ - ಗಿಟ್ಟುಟ.
53. ಗೋರು - ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು - ಹಿಂದುವು.
61. ಸ್ತ್ರೀ-ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ - ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ- ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು- ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು- ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು- ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು- ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು- ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ - ದೋಬೂಚುಲಾಟ.
111. ಪ್ರಜಲು - ಮಾನವುಲು.
112. ಆಸ್ತಿ - ದೋಸ್ತಿ
113. ದಂತಮು-ಅಂತಮು.
114. ಮಾಯ ಮರ್ಮಮು-ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.

# 'ಇಂದೂ ಜ್ಞಾನವೇದಿಕೆ' ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಶಿವರಾಜ**

(ಸಾ)(ಕಿ) ಕುಕನೂರು (ಪೊ)

ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನೆಂ. –38,

ಬೆಂಗಳೂರು–560085

Cell : 9036982829

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ

ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ,

ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ,

(ತಾ) ಮಾನವಿ, ರಾಯಚೂರು (ಜಿ)

Cell : 9632418716

**ಸೂರ್ಯ ಪ್ರಕಾಶ**

ಟೈಪ್ 'ಸಿ' (ಸಾ) (ಪೊ) ಶಕ್ತಿನಗರ

(ತಾ), ರಾಯಚೂರು (ಜಿ)

Cell : 9611183107, 9164886981

**ಲೀಲಾವತಿ**

ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097

Cell : 9986369118

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನೆಂ. –38,

ಬೆಂಗಳೂರು–560068

Cell : 08970772028, 07411459912, 07406039453

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,

ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ಒಟ್ಟು ಪ್ರಪಂಚದಲ್ಲಿ ಸುಮಾರು ಹದಿನೆಂಟು (18) ನೂರು ಭಾಷೆಗಳಿವೆಯೆಂದು ವದಂತಿ. ಅದರಲ್ಲಿ ಹದಿನಾಲ್ಕು (14) ನೂರು ಭಾಷೆಗಳು ಲಿಪಿ ಇರುವಂತವುಗಳಾದರೆ, ಲಿಪಿಯಿಲ್ಲದವು ನಾಲ್ಕು (4) ನೂರು ಭಾಷೆಗಳಿರುವವೆಂದು ಕೆಲವರು ಹೇಳಿರುವುದನ್ನು ಕೇಳಿದ್ದೇನೆ. ಒಟ್ಟಾರೆ ಭಾಷೆಗಳಲ್ಲಿ ಕೆಲವು ದೇಶ ಭಾಷೆಗಳಾದರೆ, ಕೆಲವು ಮಾತ್ರ ಪ್ರಾಂತ್ರೀಯ ಭಾಷೆಗಳಾಗಿವೆ. ಭಾರತದೇಶದಲ್ಲಿ ಹಿಂದಿ ಭಾಷೆ ದೇಶಭಾಷೆಯಾದರೆ, ಆಂಧ್ರ ರಾಷ್ಟ್ರದಲ್ಲಿ ತೆಲುಗು ಭಾಷೆ ಪ್ರಾಂತೀಯ ಭಾಷೆಯಾಗಿ ಇದೆ. ಆಂಧ್ರ ರಾಷ್ಟ್ರದಲ್ಲಿ ತೆಲುಗು ಭಾಷೆ ಲಿಪಿಯಿರುವ ಭಾಷೆಯಾದರೆ, ಲಿಪಿಯಿಲ್ಲದ ಭಾಷೆಗಳು ಈ ರಾಷ್ಟ್ರದಲ್ಲಿಯೆ ಎಷ್ಟೋ ಇವೆ. ಒಟ್ಟಾರೆ ದೇಶದಲ್ಲಿ ಲಿಪಿಯಿರುವ ಭಾಷೆಗಳಲ್ಲಿ ತೆಲುಗು ದೊಡ್ಡದಾದರೆ, ಲಿಪಿಯಿಲ್ಲದ ಭಾಷೆಗಳಲ್ಲಿ ಸಂಸ್ಕೃತ ಭಾಷೆ ದೊಡ್ಡದೆಂದು ಕೆಲವರು ಹೇಳುವುದನ್ನು ಕೇಳಿದ್ದೇನೆ. ("**ದೇಶ ಭಾಷೆಗಳಲ್ಲಿ ತೆಲುಗು ಲೆಸ್ಸ**") ಎಂದು ಗುರುಜಾಡ ಅಪ್ಪಾರಾವು ಹೇಳಿದಂತೆ ವದಂತಿ ಇದೆ. ತೆಲುಗು ಭಾಷೆಯಲ್ಲಿರುವ ಅಕ್ಷರಗಳು ಮತ್ತೆ ಯಾವ ಇತರೆ ಭಾಷೆಯಲ್ಲಿಯು ಇಲ್ಲ. ಆದ್ದರಿಂದ ಯಾವ ಶಬ್ದವನ್ನಾದರೂ ಸುಲಭವಾಗಿ ಇದ್ದದ್ದು ಇದ್ದಹಾಗೆ ಬರೆಯಬಹುದು. ಉತ್ತರ ಭಾರತ ದೇಶದಲ್ಲಿ ಪೂರ್ವದಲ್ಲಿ ಓದು ಬರುತ್ತಿದ್ದ ಪಂಡಿತರು ಹೆಚ್ಚಾಗಿ ಇರುತ್ತಿದ್ದರು. ದಕ್ಷಿಣ ಭಾರತದೇಶದಲ್ಲಿ ಓದುಬಾರದ ಪಾಮರರು ಹೆಚ್ಚಾಗಿ ಇರುತ್ತಿದ್ದರು. ಭಾಷಾ ಪಾಂಡಿತ್ಯವಿರುವ ಪಂಡಿತರು ತಮ್ಮ ತಮ್ಮ ರಚನೆಗಳೆಲ್ಲವನ್ನು ಲಿಪಿಯಿಲ್ಲದ ಸಂಸ್ಕೃತ ಭಾಷೆಯಲ್ಲಿ ಹೇಳುತ್ತಾ, ಲಿಪಿಯಿರುವ ಹಿಂದಿ ಭಾಷೆಯಲ್ಲಿ ಬರೆದಿದ್ದಾರೆ. ತ್ರೇತಾಯುಗದಲ್ಲಿನ ಆದಿಕವಿ ವಾಲ್ಮೀಕಿಯೊಂದಿಗೆ ಮೊದಲುಗೊಂಡು ದ್ವಾಪರಯುಗದಲ್ಲಿ ವೇದವ್ಯಾಸನ ವರೆಗು ಸಂಸ್ಕೃತದಲ್ಲಿಯೆ ತಮ್ಮ ರಚನೆಗಳೆಲ್ಲವನ್ನು ಹೇಳಿದ್ದಾರೆ. ಲಿಪಿ ಇಲ್ಲದ ಭಾಷೆಯಾದರೂ ಸಂಸ್ಕೃತ ಭಾಷೆಗಿರುವಷ್ಟು ಬೆಲೆ ಮತ್ತೆ ಯಾವ ಭಾಷೆಗೂ ಇಲ್ಲವೆಂದೇ ಹೇಳಬಹುದು. ಸಂಸ್ಕೃತವನ್ನು ಹಿಂದಿ ಭಾಷೆಯ ಲಿಪಿಯಿಂದ ಬರೆದಿರುವುದರಿಂದ, ಅದೂ ಸಹ ದೇಶಭಾಷೆಯೊಂದಿಗೆ ಸಮಾನವಾಗಿ ಪ್ರಚಾರವಾಗಿದೆ. ದುರದೃಷ್ಟವಶಾತ್ತು ದಕ್ಷಿಣ ಭಾರತದೇಶದಲ್ಲಿ ಕೇವಲ ಒಂದು

ರಾಷ್ಟ್ರದಲ್ಲಿ ಮಾತ್ರವಿದ್ದ ತೆಲುಗು ಭಾಷೆಯಲ್ಲಿ ಪೂರ್ವದ ಯುಗಗಳಲ್ಲಿ ಕವಿಗಳು, ಪಂಡಿತರು ಇಲ್ಲವಾದ್ದರಿಂದ ತೆಲುಗು ಭಾಷೆಯವೊಂದು ದೊಡ್ಡತನ ದೇಶದಲ್ಲಿ ಬಹಳ ಪ್ರಾಂತದವರಿಗೆ ತಿಳಿಯದೆ ಹೋಗಿದೆ. ಕಲಿಯುಗದಲ್ಲಿ ಆರು (6) ನೂರು ವರ್ಷಗಳ ಹಿಂದೆ ಆಂಧ್ರದೇಶವನ್ನು ಪಾಲಿಸಿದ ಕೃಷ್ಣದೇವರಾಯರು ತೆಲುಗು ಭಾಷೆಯನ್ನು, ತೆಲುಗು ಭಾಷಾ ಕವಿಗಳನ್ನು ಪೋಷಿಸಿರುವುದರಿಂದ ತೆಲುಗು ಭಾಷೆಯವೊಂದರ ಪ್ರಾವೀಣ್ಯತೆ ಸ್ವಲ್ಪ ಹೊರಬಂದಿದೆ. ಅದಕ್ಕು ಮೊದಲು ವ್ಯಾಸನು ಸಂಸ್ಕೃತದಲ್ಲಿ ಬರೆದ ಭಾರತ ಭಾಗವತ ಗ್ರಂಥಗಳನ್ನು ತೆಲುಗಿನೊಳಗೆ ನನ್ನಯ, ತಿಕ್ಕನ, ಎರ್ರಾಪ್ರಗಡ ಎನ್ನುವ ಮೂವರು ಕವಿಗಳು ಬರೆದಿರುವುದರಿಂದ, ತೆಲುಗು ಭಾಷೆಯಲ್ಲಿ ಹಾಡು, ಪದ್ಯ, ಗದ್ಯ, ದ್ವಿಪದ ರೂಪದಲ್ಲಿ ಬರೆಯುವುದಕ್ಕೆ ಅನುಕೂಲವಿರುವುದರಿಂದ, ಮತ್ತೆ ಯಾವ ಇತರೆ ಭಾಷೆಗಳಲ್ಲಿ ಇಂತಹ ಅನುಕೂಲ ಇಲ್ಲವಾದ್ದರಿಂದ, ತೆಲುಗು ಭಾಷೆ ಇತರೆ ಪ್ರಾಂತದವರಿಗೆ ಕೆಲವರಿಗೆ ತಿಳಿದಿರುವುದೆ ಅಲ್ಲದೆ, ದೇಶಭಾಷೆಗಳಲ್ಲಿ ತೆಲುಗು ದೊಡ್ಡ ಭಾಷೆಯೆಂದು ತಿಳಿದುಹೋಯಿತು. ತೆಲುಗು ಭಾಷೆಯವೊಂದು ಪದಗಳ ಸೇರಿಸುವಿಕೆಯಲ್ಲಿನ ನೈಪುಣ್ಯತೆ, ಶಬ್ದ ಉಚ್ಚಾರಣೆಯಲ್ಲಿನ ಅಂದ ಇತರೆ ಭಾಷೆಗಳಲ್ಲಿ ಹುಡುಕಿದರೂ ಕಾಣಿಸದೆ ಹೋಗಿರುವುದರಿಂದ, ತೆಲುಗು ಭಾಷೆಯನ್ನು ನೋಡಿದ ಯಾರಾದರೂ, ಇದು ದೇಶಭಾಷೆಗಳಲ್ಲಿಯೆ ದೊಡ್ಡ ಭಾಷೆಯೆಂದು ಹೇಳದೆ ತಪ್ಪುವುದಿಲ್ಲ.

ಇದೆಲ್ಲವೂ ತೆಲುಗು ಭಾಷೆಯವೊಂದರ ದೊಡ್ಡತನಕ್ಕೆ ಕಾಣಿಸುವ ಸತ್ಯವಾದರೆ, ಕಾಣಿಸದ ಸತ್ಯವೊಂದು ಇದೆ. ಅದು ತೆಲುಗು ಭಾಷೆ ಹುಟ್ಟುವುದಕ್ಕೆ ಕಾರಣವಾಗಿದೆಯೆಂದು ಹೇಳಬಹುದು. ಅದನ್ನು ವಿವರಿಸಿ ಹೇಳಿಕೊಂಡರೆ ತೆಲುಗು ಭಾಷೆ ದೇಶಭಾಷೆಗಳಲ್ಲಿ ದೊಡ್ಡದೆಂದು ಕಾಣಿಸುವ ವಿವರಗಳ ಪ್ರಕಾರ ಹೇಳುವುದಾದರೆ, ತೆಲುಗು ಭಾಷೆ 'ದೇಹಿ' ಭಾಷೆಗಳಲ್ಲಿಯೆ ದೊಡ್ಡದೆಂದು ಕಾಣಿಸದ ವಿವರಗಳ ಪ್ರಕಾರ ಹೇಳಬಹುದು. ದೇಶ ಕಾಣಿಸುವಂತದ್ದು, ದೇಹಿ ಕಾಣಿಸದಂತದ್ದು. ದೇಶದಲ್ಲಿ ಮನುಷ್ಯರಿಂದ ಹೇಳಲ್ಪಡುವ ಭಾಷೆಗಳು ಪ್ರಪಂಚ ವಿಷಯಗಳನ್ನು ತಿಳಿಸುವಂತವುಗಳಾಗಿವೆ. ದೇಹದಲ್ಲಿನ ದೇಹಿಯಿಂದ

ಹೇಳಲ್ಪಡುವ ಭಾಷೆ ಪರಮಾತ್ಮ ವಿಷಯಗಳನ್ನು ತಿಳಿಸುವಂತದ್ದಾಗಿದೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ! ದೇಶದಲ್ಲಿನ ಮನುಷ್ಯರು ಯಾರು ಹೇಳಿದರೂ ಅದು ದೇಹದೊಳಗಿನ ದೇಹಿ ಹೇಳಿದಂತೆ ಅಲ್ಲವೆ! ಆಗ ಎರಡೂ ಒಂದೇ ಆಗುತ್ತವಲ್ಲವೆ! ಎಂದು ಕೇಳಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ. ಎರಡೂ ಶರೀರದಿಂದ ಆತ್ಮ ಹೇಳುವವೇ ಆದರೂ ಹೊರಗೆ ದೇಶದ ಮೇಲೆ ದೃಷ್ಟಿಯಿಟ್ಟು ಹೇಳುವುದು ದೇಶಭಾಷೆ ಆಗುತ್ತದೆ. ಒಳಗೆ ದೇಹಿಮೇಲೆ ದೃಷ್ಟಿಯಿಟ್ಟು ಹೇಳುವುದು ದೇಹಿ ಭಾಷೆ ಆಗುತ್ತದೆ. ವಿವರವಾಗಿ ಹೇಳಿದರೆ ದೇಶಭಾಷೆ ಎಂದರೆ ಅಜ್ಞಾನದಿಂದ ಕೂಡಿಕೊಂಡಿರುವುದೆಂದು, ದೇಹಿ ಭಾಷೆಯೆಂದರೆ ಜ್ಞಾನದಿಂದ ಕೂಡಿಕೊಂಡಿರುವುದೆಂದು ಹೇಳಬಹುದು. ತೆಲುಗು ಭಾಷೆಯಲ್ಲಿನ ಪ್ರಾವೀಣ್ಯತೆ ಈಕಡೆ ಹೊರಗೆ ದೇಶಭಾಷೆ ಪ್ರಕಾರವೂ ಇದೆ, ಹಾಗೆ ಒಳಗೆ ದೇಹಿ ಭಾಷೆ ಪ್ರಕಾರವೂ ಇದೆ. ಒಳಗಿನ ಆತ್ಮದವೊಂದು ಜ್ಞಾನವನ್ನು ಹೇಳುವಾಗ ಆತ್ಮಜ್ಞಾನಕ್ಕೆ ಬಹಳ ಹತ್ತಿರವಾಗಿರುವುದು ಒಂದೇ ಒಂದು ತೆಲುಗು ಭಾಷೆ. ತೆಲುಗು ಭಾಷೆಯಲ್ಲಿನ ಶಬ್ದಗಳು, ಪದ ಉಚ್ಚಾರಣೆಗಳು ಆತ್ಮಜ್ಞಾನಕ್ಕೆ ಇರುವಷ್ಟು ಹತ್ತಿರವಾಗಿ ಮತ್ತೆ ಯಾವ ಇತರೆ ಭಾಷೆಯಲ್ಲಿಯೂ ಇಲ್ಲ. ಆದ್ದರಿಂದ ತೆಲುಗು ಭಾಷೆ ದೈವಜ್ಞಾನವನ್ನು ಹತ್ತಿರವಾಗಿ ಹೇಳುವುದಕ್ಕೆ ತಯಾರು ಮಾಡಲಾಗಿದೆಯೆಂದು, ಆತ್ಮಜ್ಞಾನವನ್ನು ತಿಳಿಸುವುದಕ್ಕೆ ಪ್ರತ್ಯೇಕವಾಗಿ ತಯಾರು ಮಾಡಲಾಗಿರುವ ಭಾಷೆ ಇದೇಯೆಂದು ಹೇಳಬಹುದು. ಈ ಕಾರಣದಿಂದ ತೆಲುಗು ಭಾಷೆಯನ್ನು ತಿಳಿದವರಿಗೇ ದೈವಜ್ಞಾನವನ್ನು ತಿಳಿದುಕೊಳ್ಳುವ ಅವಕಾಶ ಹೆಚ್ಚಿನದಾಗಿದೆಯೆಂದು ತಿಳಿಯುತ್ತಿದೆ. ಆತ್ಮಜ್ಞಾನವನ್ನು ತಿಳಿದವರು ಯಾವ ಪ್ರಾಂತದವರಾದರೂ, ತೆಲುಗು ಭಾಷೆಯನ್ನು ತಿಳಿದ ನಂತರ ತಮ್ಮ ಜ್ಞಾನಕ್ಕೂ ತೆಲುಗು ಭಾಷೆಗೂ ಇರುವ ಸಂಬಂಧವನ್ನು ನೋಡಿ, ಆತ್ಮಜ್ಞಾನಕ್ಕೋಸ್ಕರವೇ ಪ್ರತ್ಯೇಕವಾಗಿ ತಯಾರುಮಾಡಲಾಗಿರುವುದು ತೆಲುಗು ಭಾಷೆಯೆಂದು ತಪ್ಪದೆ ಹೇಳುವರು. ದೇವರು ತನ್ನ ಭಾವನೆಗಳನ್ನು ತಿಳಿಸುವುದಕ್ಕೆ ಹೆಚ್ಚಿನ ಅನುಕೂಲ ಇರುವಂತೆ ತೆಲುಗು ಭಾಷೆಯನ್ನು ಮೊದಲೇ ತಯಾರುಮಾಡಿ ಇಟ್ಟಿದ್ದಾನೆಂದು, ಭೂಮಿ ಮೇಲೆ ತನ್ನ ಧರ್ಮಗಳನ್ನು ಮೂರನೇ ಅವತಾರದಲ್ಲಿ

ಸಂಪೂರ್ಣ ಮಾಡುವುದಕ್ಕೆ ತೆಲುಗು ಭಾಷೆಯನ್ನು ಉಪಯೋಗಿಸಿ ಕೊಳ್ಳುವನೆಂದು ತಿಳಿಯುತ್ತಿದೆ. ದೇವರು ಭಗವದ್ಗೀತೆಯಲ್ಲಿ ಹೇಳಿದ ತನ್ನ ತ್ರೈತಸಿದ್ಧಾಂತವನ್ನು ಅನುಸರಿಸಿ, ತನ್ನ ಧರ್ಮಗಳನ್ನು ಜ್ಞಾನರೂಪದಲ್ಲಿ ಪೂರ್ತಿ ವಿವರವಾಗಿ ತಿಳಿಸುವುದಕ್ಕೆ ಮೂರು ಬಾರಿ ಭೂಮಿಮೇಲೆ ಬರಬೇಕಾಗಿದೆ. ಮೂರನೇ ಬಾರಿ ಬಂದಾಗ ಯಾವುದೇ ಸಂಶಯ ಇಲ್ಲದಂತೆ, ಪ್ರಶ್ನೆ ಎನ್ನುವುದು ಉಳಿಯದಂತೆ, ಶಾಸ್ತ್ರಬದ್ಧವಾಗಿ ಸಂಪೂರ್ಣ ಸಮಾಚಾರವನ್ನು ಒದಗಿಸಬೇಕಾಗಿದೆ. ಹಾಗಿರುವಾಗ ತನ್ನ ಭಾವವನ್ನು (ದೈವಭಾವವನ್ನು) ಬಾಹ್ಯವಾಗಿ ತಿಳಿಸುವುದು ಭಾಷೆಯೆ. ಒಳಗಿನ ಭಾವವನ್ನು ಹೊರಗೆ ತಿಳಿಸುವುದು ಭಾಷೆಯೇ ಆಗಿರುವಾಗ, ಆ ಭಾಷೆಯನ್ನು ತನ್ನ ಭಾವನೆಗಳಿಗೆ ಹತ್ತಿರವಾಗಿ ಪ್ರಜೆಗಳು ಅರ್ಥಮಾಡಿಕೊಳ್ಳುವಂತೆ ತೆಲುಗು ಭಾಷೆಯನ್ನು ತಯಾರುಮಾಡಿ ಇಟ್ಟಿದ್ದಾನೆ. ಸಂಪೂರ್ಣವಾಗಿ ದೈವ ಭಾವಗಳನ್ನು ಪ್ರಕಟಿಸುವ ಭಾಷೆ ಯಾವುದಾದರೆ ಇದೆಯೊ, ಆ ಭಾಷೆಯಿಂದಲೆ ತನ್ನ ಮೂರನೆ ಅವತಾರದಿಂದ ಧರ್ಮ ಪ್ರಕಟಣೆ ಸಂಪೂರ್ಣಮಾಡಿ ಹೋಗುವನು.

ದೈವ ಧರ್ಮಗಳನ್ನು ಸಂಪೂರ್ಣವಾಗಿ ವ್ಯಕ್ತಮಾಡುವ ಭಾಷೆ ಒಂದೇ ಒಂದು ತೆಲುಗು ಭಾಷೆ. ಆದ್ದರಿಂದ ಒಂದು ವಿಧದಲ್ಲಿ "ದೇಶಭಾಷೆಗಳಲ್ಲಿ ತೆಲುಗು ಲೆಸ್ಸ" ಎಂದು ಕೆಲವರಂದರೂ ಈಗ ನಾವು **"ದೇಹಿ ಭಾಷೆಗಳಲ್ಲಿ ತೆಲುಗು ದೊಡ್ಡದು"** ಎಂದು ಹೇಳುತ್ತೇವೆ. ದೇಹಿ ಎಂದರೆ ದೇಹವನ್ನು ಧರಿಸಿರುವುದೆಂದು ಅರ್ಥ. ದೇಹವನ್ನು ಧರಿಸಿರುವವು ಎರಡು ಆತ್ಮಗಳಿವೆ. ಅದರಲ್ಲಿ ಒಂದು ಜೀವಾತ್ಮ, ಎರಡು ಆತ್ಮ. ಆತ್ಮವೇ ಜೀವಾತ್ಮನನ್ನು ತನ್ನ ಹಿಂದೆಳೆದುಕೊಂಡು ಬಂದು ಶರೀರದಲ್ಲಿ ಪ್ರವೇಶಿಸುತ್ತದೆ. ಆದ್ದರಿಂದ ಜೀವಿಯು ಶರೀರದೊಳಗೆ ಪ್ರವೇಶ ಮಾಡುವವನಾದರೆ, ಆತ್ಮ ಶರೀರದೊಳಗೆ ಪ್ರವೇಶಿಸುವಂತದ್ದಾಗಿದೆ. ಮೊದಲು ದೇಹದೊಳಗೆ ಸೇರುವುದು ಆತ್ಮ ಆಗಿರುವುದರಿಂದ ಅದನ್ನು ದೇಹಿ ಎನ್ನುತ್ತಿದ್ದೇವೆ. ವಿವರವಾಗಿ ಹೇಳಿಕೊಂಡರೆ ದೇಹದೊಳಗೆ ಸಿಲುಕಿಕೊಂಡಿರುವವನು ಜೀವಾತ್ಮ. ದೇಹವನ್ನು ಧರಿಸಿರುವವನು ಆತ್ಮ. ಒಬ್ಬನು

ಕೋಟನ್ನು ಧರಿಸಿ ಕೋಟಿಗಿರುವ ಜೇಬಲ್ಲಿ ತನ್ನ ಜೊತೆಗೆ ತಂದುಕೊಂಡ ನೂರು ರೂಪಾಯಿಗಳ ನೋಟನ್ನು ಇಟ್ಟುಕೊಂಡಿದ್ದಾನೆಂದುಕೊಳ್ಳಿ. ಆಗ ಕೋಟನ್ನು ಧರಿಸಿರುವುದು ಆ ವ್ಯಕ್ತಿಯೇಯಾಗಲಿ ಆತನ ನೂರು ರೂಪಾಯಿಗಳ ನೋಟು ಅಲ್ಲತಾನೆ! ಹಾಗೇ ಆತ್ಮ ಶರೀರವನ್ನು ಧರಿಸುತ್ತಿರುವಾಗ ಆತ್ಮ ಹಿಂದೆ ಬರುವ ಜೀವಾತ್ಮ ಕೋಟಿನ ಜೇಬಿನೊಳಗೆ ನೋಟು ಇದ್ದಂತೆ ಶರೀರದೊಳಗಿರುವ ಗುಣಚಕ್ರದಲ್ಲಿ ಇರುತ್ತದೆ. ಶರೀರದಲ್ಲಿ ಒಂದು ಜಾಗದಲ್ಲಿರುವ ಜೀವಾತ್ಮನನ್ನು ಬಿಟ್ಟು ಶರೀರವೆಲ್ಲಾ ವ್ಯಾಪಿಸಿರುವ ಆತ್ಮವನ್ನು, ದೇಹವನ್ನು ಧರಿಸಿದ ದೇಹಿ ಎನ್ನುತ್ತಿದ್ದೇವೆ. ದೇಹಿ ಆಗಿರುವ ಆತ್ಮ ದೇವರಿಗೂ, ಜೀವಿಗೂ ಮಧ್ಯವರ್ತಿ ಯಾಗಿದ್ದೂ ದೇವರ ಧರ್ಮಗಳನ್ನು ಜ್ಞಾನರೂಪದಲ್ಲಿ ಭಾವವನ್ನು ವ್ಯಕ್ತ ಮಾಡುತ್ತಿದೆ. ಹಾಗೆ ಭಗವದ್ಗೀತೆಯ ಭಾವವನ್ನು ಮೊದಲು ಹಿಂದಿ ಭಾಷೆಯಲ್ಲಿ ಶ್ರೀಕೃಷ್ಣನು ವ್ಯಕ್ತಪಡಿಸಿದರೆ, ವ್ಯಾಸನು ಸಂಸ್ಕೃತ ಭಾಷೆಯಿಂದ ಹಿಂದಿ ಲಿಪಿಯಲ್ಲಿ ಬರೆದಿಟ್ಟಿದ್ದಾನೆ. ದೇವರು ಒಂದುಬಾರಿ ಧರ್ಮಸಂಸ್ಥಾಪನೆ ಮಾಡುವ ಸಲುವಾಗಿ ಮೂರುಬಾರಿ ಭಗವಂತನಾಗಿ ಹುಟ್ಟಬೇಕಾಗಿದೆ. ಮೊದಲು ಕೃಷ್ಣನಾಗಿ ಹುಟ್ಟಿ ಭಗವದ್ಗೀತೆಯನ್ನು ಪ್ರಕಟಿಸಿದಾಗ, ಅದನ್ನು ಲಿಪಿ ಇಲ್ಲದ ಸಂಸ್ಕೃತದಲ್ಲಿ ಹಿಂದೀ ಲಿಪಿಯನ್ನು ಉಪಯೋಗಿಸಿ ಬರೆದರೆ, ದೇವರ ಕೊನೆಯ ಅವತಾರ ಭಾರತ ದೇಶದಲ್ಲಿ ದಕ್ಷಿಣ ಪ್ರಾಂತ ಭಾಷೆಯಾದ ತೆಲುಗು ಭಾಷೆಯಲ್ಲಿಯೆ ತನ್ನ ಧರ್ಮಗಳನ್ನು ತಿಳಿಸುವನೆನ್ನುವುದಕ್ಕೆ ಎಷ್ಟೋ ಆಧಾರಗಳಿವೆ. ಅವುಗಳೆ ತೆಲುಗು ಭಾಷೆಗೂ ದೇವರ ಜ್ಞಾನಕ್ಕೂ ಹತ್ತಿರವಿರುವ ಸಂಬಂಧಗಳು. ಈಗ ದೇವರ ಜ್ಞಾನಕ್ಕೂ, ಭಾಷಾ ಶಬ್ಧಗಳಿಗು ಇರುವ ಸಂಬಂಧಗಳನ್ನು ವಿವರಿಸಿಕೊಂಡು ನೋಡೋಣ.

ತೆಲುಗು ಭಾಷೆ ದೈವಜ್ಞಾನಕ್ಕೆ ಎಷ್ಟು ಸಂಬಂಧಪಟ್ಟಿದೆಯೆಂದು ತಿಳಿಯಬೇಕೆಂದರೆ, ಅಷ್ಟೋ ಇಷ್ಟೋ ದೈವಜ್ಞಾನವಿರುವವರಿಗೇ ತಿಳಿಯುವುದೆಂದು ನಮ್ಮ ಹಿರಿಯರು ಹೇಳುತ್ತಿದ್ದರು. ಭೂಮಿಮೇಲೆ ಎಷ್ಟೋ ಜನರು ಪ್ರಪಂಚ ಜ್ಞಾನದ ಮೇಲೆ ಆಸಕ್ತಿಯಿರುವವರಿರುವಾಗ, ಸ್ವಲ್ಪ ಜನ ಮಾತ್ರ ಪರಮಾತ್ಮ

ಜ್ಞಾನದ ಮೇಲೆ ಆಸಕ್ತಿ ಇರುವವರಿದ್ದಾರೆ. ಅಂತವರು ಇದ್ದಾರೆನ್ನುವುದಕ್ಕೆ ಗುರುತಿಗೆ ಪೂರ್ವದ ನಮ್ಮ ಹಿರಿಯರು ಮನುಷ್ಯರಿಗೆ ಎರಡು ಹೆಸರುಗಳನ್ನು ಇಟ್ಟಿದ್ದಾರೆ. ಅವು ಒಂದು ಭಾನುಮತಿ, ಎರಡು ಚಂದ್ರಮತಿ ಅಥವಾ ಇಂದುಮತಿ. ಆಕಾಶದಲ್ಲಿ ಪ್ರಕಾಶಿಸುವವರು ಒಬ್ಬರು ಸೂರ್ಯನು, ಎರಡು ಚಂದ್ರನು. ಸೂರ್ಯನು ಮನುಷ್ಯರಿಗೆ ಪ್ರಕಾಶವನ್ನು ಕೊಟ್ಟರೆ ಚಂದ್ರನು ಮನುಷ್ಯರ ಮೆದುಳಿಗೆ ಪ್ರಕಾಶವನ್ನು ಕೊಡುತ್ತಾನೆಂದು ಹೇಳಬಹುದು. ಸೂರ್ಯನು ಪ್ರಪಂಚ ಜ್ಞಾನಕ್ಕೆ ಅಧಿಪತಿಯಾದರೆ, ಚಂದ್ರನು ದೈವಜ್ಞಾನಕ್ಕೆ ಅಧಿಪತಿಯಾಗಿದ್ದಾನೆ. ಜ್ಯೋತಿಷ್ಯಶಾಸ್ತ್ರ ದಲ್ಲಿ ಸೂರ್ಯಚಂದ್ರ ಸ್ಥಾನಗಳನ್ನು ಅನುಸರಿಸಿ ಜಾತಕನು ಭಾನುಮತಿಯಾ ಅಥವಾ ಇಂದುಮತಿಯಾ ಎಂದು ಹೇಳಬಹುದು. ಆಕಾಶದಲ್ಲಿ ಪ್ರಕಾಶಿಸು ವವುಗಳಲ್ಲಿ ಮೊದಲು ಹೇಳಬೇಕಾಗಿರುವುದು ಸೂರ್ಯನನ್ನಾದರೆ, ಸೂರ್ಯನ ನಂತರ ಚಂದ್ರನನ್ನು ಹೇಳಬಹುದು. ಈ ಸೂರ್ಯಚಂದ್ರರು ಎರಡೆ ಅಲ್ಲದೆ ಪ್ರಕಾಶಿಸುವ ಮೂರನೆಯದು ಸಹ ಇದೆ. ಅದೇ ನಕ್ಷತ್ರ. ಸೂರ್ಯ ಚಂದ್ರರ ನಂತರ ನಕ್ಷತ್ರವನ್ನು ಹೇಳಬಹುದು. ಕನ್ನಡ ಭಾಷೆಯಲ್ಲಿ ಕ್ಷತ್ರ ಎಂದರೆ ಛತ್ರಿ ಅಥವಾ ನಾಶ ಎಂದು ಹೇಳಬಹುದು. ನಕ್ಷತ್ರ ಎಂದರೆ ಛತ್ರಿ ಕೆಳಗೆ ಇಲ್ಲದ್ದು ಎಂದು ಹೇಳಬಹುದು. ಹಾಗೇ ಮತ್ತೊಂದು ಅರ್ಥದಲ್ಲಿ ನಾಶವಿಲ್ಲದ್ದು ಎಂದು ಸಹ ಹೇಳಬಹುದು. ಛತ್ರಿ ಕೆಳಗೆ ಇಲ್ಲದಿರುವವನು ಎಂದು ಹೇಳಿಕೊಂಡರೆ ಒಬ್ಬರ ರಕ್ಷಣೆಯಲ್ಲಿ ಇಲ್ಲದಿರುವವನು ಎಂದೂ, ಮತ್ತೊಬ್ಬರ ಅಧೀನದಲ್ಲಿ ಇಲ್ಲದಿರುವನೆಂದು ಹೇಳಬಹುದು. ಪ್ರಪಂಚದಲ್ಲಿರುವ ಮನುಷ್ಯರೆಲ್ಲರೂ ದೇವರ ಅಧೀನದಲ್ಲಿರುವಾಗ, ದೇವರು ಯಾರ ಅಧೀನದಲ್ಲಿಯೂ ಇಲ್ಲ. ಈ ವಿಷಯವನ್ನು ತಿಳಿಸುವುದಕ್ಕೆ ದೈವ ಸಮಾನವಾದ ಗುರು ತನ್ನ ತಲೆಯ ಮೇಲೆ ಟೋಪಿಯನ್ನಾಗಲೀ, ರುಮಾಲನ್ನಾಗಲೀ ಧರಿಸುವವನಲ್ಲ. ಉಳಿದ ಪ್ರಜೆಗಳೆಲ್ಲರೂ ಯಾವುದೋ ಒಂದನ್ನು ತಲೆಯ ಮೇಲೆ ಧರಿಸಿ ದೇವರ ಅಧೀನದಲ್ಲಿ ಇದ್ದೇವೆನ್ನುವಂತೆ ತಿಳಿಸುತ್ತಿದ್ದರು. ತಲೆಯ ಮೇಲೆ ಟೋಪಿಯನ್ನು ಧರಿಸುವುದು ಅಥವಾ ಬಟ್ಟೆಯನ್ನು ಧರಿಸುವುದು, ರುಮಾಲನ್ನು ಧರಿಸುವುದು ಪೂರ್ವದಿಂದಲೂ ಇಂದೂಗಳಲ್ಲಿ (ಹಿಂದುಗಳಲ್ಲಿ)ದ್ದ ಸಂಪ್ರದಾಯ. ಹಾಗೇ

ಗುರುವಾಗಿರುವವನು ಮುಸುಗನ್ನು ಹಾಕುವುದಾಗಲೀ, ಟೋಪೀಯನ್ನು ಇಟ್ಟುಕೊಳ್ಳುವುದಾಗಲೀ, ರುಮಾಲನ್ನು ಸುತ್ತಿಕೊಳ್ಳುವುದಾಗಲೀ ಮಾಡುವವನಲ್ಲ.

ಆಕಾಶದಲ್ಲಿ ಪ್ರಕಾಶಿಸುತ್ತಿರುವ ಸೂರ್ಯ, ಚಂದ್ರ, ನಕ್ಷತ್ರಗಳನ್ನು ಅನುಸರಿಸಿ ಭೂಮಿ ಮೇಲೆ ಮನುಷ್ಯರನ್ನು ಮೂರು ವಿಧಗಳಾಗಿ ವಿಭಜಿಸಬಹುದು. ದೈವ ಸಮಾನವಾದ ಗುರು ನಕ್ಷತ್ರಕ್ಕೆ ಗುರುತಾಗಿ, ದೈವ ಜ್ಞಾನವನ್ನು ಹೊಂದಿರುವ ಗುರು ಶಿಷ್ಯರನ್ನು ಅಥವಾ ಜ್ಞಾನಿಗಳನ್ನು ಚಂದ್ರನಿಗೆ ಗುರುತಾಗಿ, ದೈವ ಜ್ಞಾನವೆಂದರೇನೋ ತಿಳಿಯದ ಪ್ರಪಂಚದಲ್ಲಿ ಚುರುಕಾಗಿ ತಿರುಗುವ ಅಜ್ಞಾನಿಗಳನ್ನು ಸೂರ್ಯನ ಗುರುತಾಗಿ ಹೇಳಬಹುದು. ಗುರುವು ಒಬ್ಬನೇ ಇರುತ್ತಾನೆ. ಗುರು ಯಾವಾಗ ಇರುತ್ತಾನೋ, ಎಲ್ಲಿರುತ್ತಾನೋ, ಹೇಗೆ ಇರುತ್ತಾನೋ ಸಹ ತಿಳಿಯುವುದಿಲ್ಲ. ಆದ್ದರಿಂದ ಗುರುವನ್ನು ಹೊರತು ಉಳಿದ ಪ್ರಜೆಗಳೆಲ್ಲರನ್ನು ಜ್ಞಾನಿಗಳಾಗಿ, ಅಜ್ಞಾನಿಗಳಾಗಿ ವಿಭಜಿಸಿ ಹೇಳಬಹುದು. ಇದನ್ನು ಅನುಸರಿಸಿ ನೋಡಿದರೆ ಪೂರ್ವದಲ್ಲಿ ಮನುಷ್ಯರನ್ನು ಸೂರ್ಯವಂಶದವರೆಂದು, ಚಂದ್ರವಂಶದವರೆಂದು ಹೇಳುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಪೂರ್ತಿ ಅಜ್ಞಾನ ದಶೆಯುಲ್ಲಿರುವ ಮನುಷ್ಯನಿಗೆ ಸೂರ್ಯವಂಶವೆಂದರೆ ಏನೋ, ಚಂದ್ರವಂಶವೆಂದರೆ ಏನೋ ತಿಳಿಯದಂತೆ ಹೋಗಿದೆ. ಅಜ್ಞಾನದಿಂದ ತಾವು ಸೂರ್ಯವಂಶಕ್ಕೆ ಸಂಬಂದಿಸಿರುವವರೆಂಬ ವಿಷಯವನ್ನು ಮರೆತು ಹೋಗಿದ್ದಾರೆ. ಈಗಿರುವ ಅಜ್ಞಾನಿಗಳೆಲ್ಲರೂ ಸೂರ್ಯವಂಶಕ್ಕೆ ಸೇರಿದ ಭಾನುಮತಿಗಳೆಂದು ಹೇಳಬಹುದು. ಹಾಗೇ ಎಲ್ಲಾದರೂ ದೈವಜ್ಞಾನಿಗಳಿದ್ದರೆ ಅವರೆಲ್ಲರೂ ಚಂದ್ರವಂಶಕ್ಕೆ ಸಂಬಂಧಿಸಿದ ಇಂದೂ ಮತಿಗಳೆಂದು ಹೇಳಬಹುದು. ಈಗ ನಿಮಗೊಂದು ಅನುಮಾನ ಬರಬಹುದು. ಅದೇನೆಂದರೆ ಎಲ್ಲೋ ತೆಲುಗು ಭಾಷೆಯಲ್ಲಿ ಪ್ರಾರಂಭಿಸಿ ಚಂದ್ರವಂಶ, ಸೂರ್ಯವಂಶ ಎಂದು ಎಲ್ಲೋ ಹೋಗಿದ್ದಾನೆಂದು ಅಂದುಕೊಳ್ಳಬೇಡಿ. ಭಾಷೆಯನ್ನು ಕುರಿತು ಹೇಳಬೇಕೆಂದರೆ ಮೊದಲು ನನ್ನ ತಲೆಯ ಮೇಲೆ ಟೋಪಿ ಇದೆಯೋ ಇಲ್ಲವೋ ನಿಮಗೆ ಅರ್ಥವಾಗಬೇಕಲ್ಲವೇ! ಆದ್ದರಿಂದ ಅಲ್ಲಿಂದ ಇಲ್ಲಿಯವರೆಗು ಬಂದಿದ್ದೇವೆ. ಈಗ ಭಾಷೆಯನ್ನು ಕುರಿತೇ ಹೇಳಿಕೊಳ್ಳೋಣ.

ತೆಲುಗು ಭಾಷೆಯವೊಂದು ಲಿಪಿಯಲ್ಲಿನ ಅಕ್ಷರಗಳು ಒಟ್ಟು 54 ಆದರೆ ಸೊನ್ನೆ, ಅರ್ಧಸೊನ್ನೆ, ವಿಸರ್ಗಗಳನ್ನು ಸೇರಿಸಿ ಒಟ್ಟು 57 ಇವೆ. 54 ಅಕ್ಷರಗಳನ್ನು ಸ್ವರಗಳು, ವ್ಯಂಜನಗಳು ಎನ್ನುವ ಭಾಗಗಳಾಗಿ ವಿಭಜಿಸಿದ್ದಾರೆ. ಅದರಲ್ಲಿ ಸ್ವರಗಳು ಮೊದಲ ಭಾಗದೊಳಗಿನವು. ಸ್ವರಗಳು ಒಟ್ಟು 16 ಆದರೆ, ವ್ಯಂಜನಗಳು ಒಟ್ಟು 38 ಇವೆ. ಸ್ವರಗಳಲ್ಲಿ ಮೊದಲಿನಿಂದ ಇರುವ ಹದಿನಾರು ಅಕ್ಷರಗಳು ಹೀಗಿವೆ. ಅ,ಆ,ಇ,ಈ,ಉ,ಊ,ಋ,ಎ,ಏ,ಐ,ಒ,ಓ,ಔ. ಸ್ವರಗಳಿಂದಲೆ ತೆಲುಗು ಭಾಷೆ ಲಿಪಿಯನ್ನು ಕಲಿಯಬೇಕಾಗಿದೆ. ಆದರೆ ಪ್ರಸ್ತುತ ಕಾಲದಲ್ಲಿ "ಅ" ದಿಂದ ಪ್ರಾರಂಭಿಸಿ ಕಲಿಸುತ್ತಿರುವಾಗ, ಪೂರ್ವವು "ಅ"ದಿಂದ ಕಲಿಯದೆ, ಸ್ವರಗಳಲ್ಲದ ಪದಗಳನ್ನು ಕಲಿಸುತ್ತಿದ್ದರು. ಅರವತ್ತು (60) ವರ್ಷಗಳ ಪೂರ್ವದ ಪ್ರಾಥಮಿಕ ಪಾಠಶಾಲೆಯಲ್ಲಿ ನಾನು ಓದು ಕಲಿತುಕೊಳ್ಳುವಾಗ ಓ, ನ, ಮಃ, ಶಿ, ವಾ, ಯಃ ಎಂದು ಆರು ಅಕ್ಷರಗಳನ್ನು ಕಲಿಸಿ, ನಂತರ ಅಆ ಎಂದು ಸ್ವರಗಳನ್ನು ಕಲಿಸುತ್ತಿದ್ದರು. ಸಾವಿರ ವರ್ಷಗಳ ಹಿಂದಕ್ಕೆ ಹೋಗಿ ನೋಡಿದರೆ ತೆಲುಗು ಭಾಷೆಯುನ್ನು ಕಲಿಸುವ ಮೊದಲು ಈ ಭಾಷೆ ದೈವಕ್ಕೆ ಸಂಬಂಧಿಸಿರುವುದು ಎನ್ನುವಂತೆ ಹಿಂದೂ(ಇಂದೂ) ಜ್ಞಾನದ ಪ್ರಕಾರ ದೈವಕ್ಕೆ ಗುರುತಾಗಿರುವ "ಓಂ" ಎನ್ನುವ ಶಬ್ದವನ್ನು ಕಲಿಸುತ್ತಿದ್ದರು. ನಂತರ ಶಿವಕ್ಕೆ ನಮಸ್ಕರಿಸುತ್ತಿದ್ದೇನೆ ಎನ್ನುವ ಭಾವವನ್ನು ತಿಳಿಸುತ್ತಾ "ನಮಃಶಿವಾಯ" ಎಂದು ಅನ್ನುತ್ತಿದ್ದರು. ಅದನ್ನೆಲ್ಲಾ ಸೇರಿಸಿ "ಓಂ ನಮಃ ಶಿವಾಯ" ಎಂದು ಪೂರ್ವದಲ್ಲಿ ಕಲಿಸಿದರೆ ನಾನು ಓದುತ್ತಿರುವಾಗ ಅದು ಸ್ವಲ್ಪ ಬದಲಾಗಿ "ಓ, ನ, ಮಃ, ಶಿ, ವಾ, ಯಃ ಎಂದು ಆರು ಬಿಡಿ ಅಕ್ಷರಗಳಾಗಿ ಕಲಿಸುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಪೂರ್ವದಲ್ಲಿದ್ದಂತೆ ಓಂ ನಮಃ ಶಿವಾಯ ಎಂದಾಗಲಿ, ಅರವತ್ತು ವರ್ಷಗಳ ಕೆಳಗಿರುವಂತಹ ಆರು ಅಕ್ಷರಗಳಾದ ಓ, ನ, ಮಃ, ಶಿ, ವಾ, ಯಃ ಎಂದಾಗಲಿ ಇಲ್ಲದಂತೆ ಹೋಗಿವೆ. ಈಗಿನ ಪಾಠಶಾಲೆಗಳಲ್ಲಿ ಅ,ಆ,ಇ,ಈ ಎಂದು ಸ್ವರಗಳನ್ನು ಕಲಿಸುವುದು ನಡೆಯುತ್ತಿದೆ.

ಪೂರ್ವವು ತೆಲುಗು ಭಾಷೆಗಿಂತ ಮೊದಲು ದೈವಕ್ಕೆ ನಮಸ್ಕರಿಸಿದಂತೆ ತಿಳಿಸುವ ಓಂ ನಮಃ ಶಿವಾಯಃ ಎನ್ನುವ ಪದಗಳು ಇದ್ದಾಗ, ನಂತರ ಕಾಲಕ್ರಮದಲ್ಲಿ ದೇವರಿಗೆ ನಮಸ್ಕರಿಸುವ ಭಾವವು ಇಲ್ಲದೇ ಹೋಗಿ **ಓಂ ಒ** ನಂತೆ ಬದಲಾಗಿ ಉಳಿದವುಗಳೆಲ್ಲ ಬಿಡಿ ಅಕ್ಷರಗಳಾಗಿ ಒ,ನ,ಮಃ, ಶಿ,ವಾ,ಯಃ ಎಂದು ಹೇಳಲಾಗಿದೆ. ಈಗ ಅರ್ಥವಿಲ್ಲದ ಆರು ಅಕ್ಷರಗಳು ಹೋಗಿ ಸ್ವರಗಳಿಂದ ಪ್ರಾರಂಭಿಸಿ ಅ, ಆ, ಇ ಎಂದು ಪ್ರಾರಂಭಿಸಿ ಹೇಳುವುದು ನಡೆಯುತ್ತಿದೆ. ತೆಲುಗು ಭಾಷೆಯನ್ನು ಸ್ವರಗಳಿಂದ ಪ್ರಾರಂಭಿಸಿ ಹೇಳಿದರೂ, ಅದು ಜ್ಞಾನದಿಂದಲೆ ಕೂಡಿಕೊಂಡ ಅರ್ಥದಿಂದ ಇದೆ. ತೆಲುಗು ಭಾಷೆ ದೈವಜ್ಞಾನಕ್ಕಾಗಿಯೇ ದೇವರೇ ನಿರ್ಮಿಸಿದ ಭಾಷೆ ಎಂದು ನಾವು ಮೊದಲೇ ಹೇಳಿಕೊಂಡಂತೆ, ಸ್ವರಗಳಿಂದ ಪ್ರಾರಂಭಿಸಿ ಹೇಳಿದರೂ ಅದರಲ್ಲಿನ ಮೊದಲ ಮೂರಕ್ಷರಗಳಲ್ಲಿ ತ್ರೈತ ಸಿದ್ಧಾಂತ ಒಳಪಟ್ಟಿದ್ದು, ತೆಲುಗು ಭಾಷೆ ದೈವಭಾಷೆ ಎಂದು ಹೇಳುವುದಕ್ಕೆ ಆಸ್ಕಾರವಾಗಿದೆ. ಸ್ವರಗಳಲ್ಲಿನ ಮೊದಲ ಮೂರು ಅಕ್ಷರಗಳು ಅ,ಆ,ಇ ಎಂದು ಇವೆ. ಮೊದಲ ಮೂರು ಅಕ್ಷರಗಳನ್ನು ದೈವ ಸಿದ್ಧಾಂತವಾದ ತ್ರೈತ ಸಿದ್ಧಾಂತದೊಂದಿಗೆ ಹೋಲಿಸಿಕೊಂಡರೆ ಅ– ಜೀವಾತ್ಮ, ಆ–ಆತ್ಮ, ಇ– ಪರಮಾತ್ಮ ಎಂದು ಹೇಳಬಹುದು. ಎರಡನೆ ಅಕ್ಷರವಾದ 'ಆ'ನ್ನು ಆತ್ಮವೆಂದು ಹೇಳಿಕೊಂಡರೆ, ಮೂರನೆ 'ಇ' ಪರಮಾತ್ಮ, ಒಂದನೆಯ 'ಅ' ಜೀವಾತ್ಮನಾಗಿ ಉಳಿದುಕೊಂಡಿದೆ. ಇಂದೂ ಎಂದರೆ ಚಂದ್ರನೆಂದು, ಚಂದ್ರನು ದೇವರ ಜ್ಞಾನಕ್ಕೆ ಗುರುತು ಎಂದು ಹೇಳಿಕೊಂಡಿದ್ದೇವೆ. ದೈವಜ್ಞಾನಕ್ಕೆ ಚಂದ್ರನು ಗುರುತಾಗಿ ಇದ್ದಂತೆ ಭಗವದ್ಗೀತೆ ಯಲ್ಲಿಯೇ ಆಧಾರ ಕಾಣಿಸುತ್ತಿದೆ. ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ 23,24,25 ಶ್ಲೋಕಗಳ ಸಾರಾಂಶವನ್ನು ನೋಡಿದರೆ ಹೀಗಿದೆ. *"ಯೋಗಿಗಳು ಯಾವಾಗ ಮರಣಿಸಿದರೆ ಮತ್ತೆ ಹುಟ್ಟುವರೋ, ಯಾವಾಗ ಮರಣಿಸಿದರೆ ಮತ್ತೆ ಹುಟ್ಟದೆ ಮುಕ್ತಿಯನ್ನು ಹೊಂದುವರೊ, ಆ ಮರಣ ಸಮಯವನ್ನು ಕುರಿತು ಹೇಳುವೆನು ಕೇಳು"* ಎಂದು ಕೃಷ್ಣನು ಹೇಳಿದ್ದಾನೆ. ಹಾಗೆ ಹೇಳಿರುವಾಗ ಶಾಸ್ತ್ರಬದ್ಧತೆಯಿಂದ ಕೂಡಿದ ವಿಷಯವನ್ನು ಅರ್ಜುನನಿಗೆ ಹೇಳುತ್ತಾ ಸೂರ್ಯರಶ್ಮಿ ಬೀಳುವ ಪ್ರದೇಶದಲ್ಲಿ ಯೋಗಿ ಇದ್ದು ಆತನು ಮರಣಿಸುವ

ಸಮಯ ಹಗಲು ಕಾಲ, ಶುಕ್ಲ ಪಕ್ಷ, ಉತ್ತರಾಯಣ ಆಗಿದ್ದರೆ ಆ ಯೋಗಿ ಕರ್ಮರಹಿತನಾಗಿ ದೇವರಲ್ಲಿ ಸೇರಿಹೋಗುವನೆಂದು, ಹಾಗಲ್ಲದೆ ಸೂರ್ಯರಶ್ಮಿ ಇಲ್ಲದ ಪ್ರಾಂತದಲ್ಲಿ ಯೋಗಿ ಇದ್ದರೂ, ರಾತ್ರಿ ಕಾಲವಾದರೂ, ಕೃಷ್ಣಪಕ್ಷವಾದರೂ, ದಕ್ಷಿಣಾಯನವಾದರೂ ಯೋಗಿಯಾದವನು ಮರಣಿಸಿದರೆ ಆತನು ಮುಕ್ತಿಯನ್ನು ಹೊಂದದೆ ಮತ್ತೆ ಜನ್ಮಿಸುವನೆಂದು, ಆಗ ಆತನು ಯೋಗಿ ಆಗಿರುವುದರಿಂದ ಆತನು ಚಂದ್ರ ತೇಜವನ್ನು ಹೊಂದಿ ಹುಟ್ಟುತ್ತಿದ್ದಾನೆಂದು ಕೃಷ್ಣನು ಹೇಳಿರುವುದು ನಡೆದಿದೆ.

**ಅಕ್ಷರ ಪರಬ್ರಹ್ಮಯೋಗ : 25ನೇ ಶ್ಲೋಕ**

**ಶ್ಲೋ॥ ಧೂಮೊ ರಾತ್ರಿ ಸ್ತಥಾಕೃಷ್ಣ ಷ್ಷಣ್ಮಾಸಾ ದಕ್ಷಿಣಾಯನಮ್।**
**ತತ್ರ ಚಾಂದ್ರ ಮಸಂ ಜ್ಯೋತಿರ್ಯೋಗಿ ಪ್ರಾಪ್ಯ ನಿವರ್ತತೆ ॥**

ಈ ಶ್ಲೋಕದಲ್ಲಿ "ಚಾಂದ್ರಮಸಂ ಜ್ಯೋತಿ" ಎನ್ನುವ ವಾಕ್ಯವನ್ನು ಪರಿಶೀಲಿಸಿ ನೋಡಿದರೇ, ಸಂಪೂರ್ಣ ಜ್ಞಾನವನ್ನು ಹೊಂದಿ ಎಂದು ತಿಳಿದು ಬರುತ್ತಿದೆ. ಚಂದ್ರತೇಜಸ್ಸನ್ನು ಹೊಂದಿ ಎನ್ನುವುದರಲ್ಲಿ ದೈವಜ್ಞಾನವನ್ನು ಹೊಂದಿ ಎಂದೂ, ದೈವ ಜ್ಞಾನವನ್ನು ಚಂದ್ರ ತೇಜಸ್ಸಿನಂತೆ ಹೋಲಿಸಿ ಹೇಳಿದ್ದಾರೆಂದು ತಿಳಿಯುತ್ತಿದೆ. ದೇವರು ಹೇಳಿದ ಈ ಮಾತನ್ನು ಆಧಾರ ಮಾಡಿಕೊಂಡು ಸೂರ್ಯನನ್ನು ಜೀವಾತ್ಮನಾಗಿ, ನಕ್ಷತ್ರವನ್ನು ದೇವರೆಂದು ಹೇಳಿಕೊಂಡಿದ್ದೇವೆ. ಚಂದ್ರನು ದೇವರ ಜ್ಞಾನಕ್ಕೆ ಗುರುತಾಗಿ ಇರುವುದರಿಂದ ಇಂದೂ(ಚಂದ್ರ) ಎನ್ನುವ ಮಾತನ್ನು ಸಂಪೂರ್ಣ ಜ್ಞಾನವಿರುವವನಿಗೆ ಉಪಯೋಗಿಸಲಾಗಿದೆ. ಸೃಷ್ಠಿ ಆದಿಯಲ್ಲಿ ದೇವರು ತನ್ನ ಜ್ಞಾನವನ್ನು ಭೂಮಿ ಮೇಲೆಗೆ ಸೇರುವಂತೆ ಸೂರ್ಯನಿಗೆ ಹೇಳಿದ್ದಾನೆ. ಸೂರ್ಯನನ್ನು ಜೀವಿಯಾಗಿ ಹೋಲಿಸಿದ್ದೇವೆ, ಆದ್ದರಿಂದ ದೇವರು ಜೀವಿಗೆ ತನ್ನ ಜ್ಞಾನ ತಿಳಿಸುವನೆಂದು ಎಲ್ಲರಿಗೂ ತಿಳಿಯುವಂತೆ ಮೊದಲು ದೇವರು ಸೂರ್ಯನಿಗೆ ತನ್ನ ಬೋಧನೆಯನ್ನು ಹೇಳಿದ್ದಾನೆ. ದೇವರು ಹೇಳಿದ ಜ್ಞಾನ ಸೂರ್ಯನ ಮೂಲಕ ಭೂಮಿಗೆ

ಸೇರಿದೆ. ಸೂರ್ಯನ ಮುಖಾಂತರ ಮೊಟ್ಟಮೊದಲು ಭಾರತ ದೇಶದಲ್ಲಿಯೆ ದೇವರ ಜ್ಞಾನ ತಿಳಿದುಬಂದಿದೆ. ದೇವರ ಜ್ಞಾನ ತಿಳಿದು ಬಂದ ಮೊದಲ ದೇಶ ಭಾರತ ದೇಶ. ಆದ್ದರಿಂದ ಭಾರತ ದೇಶವನ್ನು ಜ್ಞಾನಿಗಳ ದೇಶವೆಂದು ಉಳಿದ ದೇಶದವರೆಲ್ಲರು ಹೇಳಿರುವುದು ನಡೆದಿದೆ. ಜ್ಞಾನದೇಶವಾದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದು ಕರೆಯುತ್ತಿದ್ದರು. ಒಂದು ಕಾಲದಲ್ಲಿ ಭಾರತದೇಶವೆಲ್ಲವೂ ಜ್ಞಾನಿಗಳಿದ್ದು ಚಂದ್ರ ತೇಜವನ್ನು ಹೊಂದಿರುವ ದೇಶವಾದ್ದರಿಂದ ಈ ದೇಶವನ್ನು ಆಗಿನ ಕಾಲದಲ್ಲಿ ಎಲ್ಲರೂ ಇಂದೂ ದೇಶವೆಂದು ಕೊಂಡಾಡುತ್ತಿದ್ದರು. ಕಾಲ ಕಳೆದಂತೆಲ್ಲಾ, ಒಂದು ಕಾಲದಲ್ಲಿ ಭಾರತದೇಶ ಜ್ಞಾನವಿರುವ ಇಂದೂಗಳಿಂದ ತುಂಬಿರುತ್ತಿತ್ತೆಂದು ತಮ್ಮ ಚರಿತ್ರೆ ತಿಳಿಯದ ಭಾರತೀಯರು ತಮ್ಮ ಜಾತಿ ಇಂದೂ ಜಾತಿಯೆಂದು, ತಮ್ಮ ಜ್ಞಾನ ಇಂದೂ ಜ್ಞಾನವೆಂದೂ, ತಾವು ಇಂದೂಗಳೆಂದು ಮರೆತು ಹೋಗಿ ತಮ್ಮನ್ನು ತಾವು ಅರ್ಥವಿಲ್ಲದ ಹಿಂದೂಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಇಂದೂ ಧರ್ಮಗಳ್ಯಾವುವೊ, ಇಂದೂವೆಂದರೆ ಏನೋ ತಿಳಿಯದವರು, ದೈವಜ್ಞಾನ ರವೆಯಷ್ಟು ಇಲ್ಲದವರು ಹಿಂದೂ ಧರ್ಮ ರಕ್ಷಕರೆಂದು ಹೇಳಿಕೊಳ್ಳುತ್ತಿದ್ದಾರೆ.

ಭಾರತದೇಶದಲ್ಲಿನ ಉಳಿದ ಪ್ರಾಂತದವರು ಅಜ್ಞಾನದಿಂದ ಅರ್ಥವಿಲ್ಲದ ಹಿಂದೂ ಪದವನ್ನು ಅಂಟಿಸಿಕೊಂಡು, ಅರ್ಥವಿರುವ ಇಂದೂ ಪದವನ್ನು ಬಿಟ್ಟುಹಾಕಿ, ತಾವು ಹಿಂದೂಗಳೆಂದು ಹೇಳಿಕೊಂಡರೂ ಸ್ವಲ್ಪ ತಪ್ಪಾಗಿ ಕಾಣಿಸುವುದು. ಆದರೆ ದೈವ ಜ್ಞಾನದೊಂದಿಗೆ ಸಂಬಂಧವಿರುವ ತೆಲುಗು ಭಾಷೆಯನ್ನು ಕಲಿತವರು, ಆಂಧ್ರಪ್ರದೇಶದಲ್ಲಿ ಇರುವವರಾದರೂ ತಾವು ಪೂರ್ತಿಯಾಗಿ ಜ್ಞಾನವನ್ನು ಗತ ಚರಿತ್ರೆಯನ್ನು ಮರೆತುಹೋಗಿ ನಾವು ಹಿಂದೂಗಳು ಎನ್ನುವುದು ಎಷ್ಟೋ ನಾಚಿಕೆಗೇಡಾಗಿದೆ. ಚರಿತ್ರೆ ತಿಳಿದವರು ಯಾರಾದರು ಪೂರ್ವದಿಂದ ನಾವು ಇಂದೂಗಳೆ, ಕಾಲಕ್ರಮೇಣ ಹಿಂದೂಗಳೆಂದು ತಿಳಿಯದೆ ಅಂದುಕೊಳ್ಳುವುದು ನಡೆಯುತ್ತಿದೆಯೆಂದು ವಾಸ್ತವವನ್ನು ಹೇಳಿದರೆ, ಅಲ್ಲಿಗೂ ಅರ್ಥ ಮಾಡಿಕೊಳ್ಳದ ಬುದ್ಧಿಹೀನರು

ಸತ್ಯ ಹೇಳಿದವರನ್ನು ಪರಮತದವರೆಂದು ಪ್ರಚಾರಮಾಡಿ, ತಮ್ಮನ್ನು ಹಿಂದೂಗಳಲ್ಲ ಇಂದೂಗಳೆಂದು ಹೇಳಿದ್ದಕ್ಕೆ ಜ್ಞಾನಿಗಳನ್ನು ಹಿಂಸಿಸುವುದೂ, ಅವರ ಮೇಲೆ ಭೌತಿಕದಾಳಿಗಳು ಮಾಡುವುದು, ಅವರನ್ನು ನಿಂದಿಸುವುದು ಮಾಡುತ್ತಿದ್ದಾರೆ. ಸತ್ಯವನ್ನು ಎಷ್ಟು ವಿವರಿಸಿ ಹೇಳಿದರೂ ಕೇಳುವ ಪರಿಸ್ಥಿತಿಯಲ್ಲಿ ಇಲ್ಲದ ಸ್ಥಿತಿಗೆ ಅಜ್ಞಾನದಲ್ಲಿ ಮುಳುಗಿ, ಒಂದು ಕಡೆ ಇಂದೂಮತ ಸರ್ವನಾಶವಾಗಿ ಹೋಗುತ್ತಿದ್ದರೂ, ತಾವು ಏನು ಉದ್ದರಿಸುವುದು ಮಾಡಲಾಗದಿದ್ದರೂ, ತಮ್ಮನ್ನು ತಾವು ಹಿಂದೂಮತ ರಕ್ಷಕರೆಂದು ಹೇಳಿಕೊಳ್ಳುತ್ತಿದ್ದಾರೆ.

ಸೃಷ್ಠಿ ಆದಿಯಲ್ಲಿಯೆ ದೇವರು ತನ್ನ ಧರ್ಮವನ್ನು ತಿಳಿಸಿದ್ದಾನೆ. ಆ ದಿನ ಯಾವ ಮತವನ್ನು ತಿಳಿಸಲಿಲ್ಲ. ಆ ದಿನ ತಿಳಿಸಿದ ಧರ್ಮ ದೈವ ಜ್ಞಾನಕ್ಕೆ ಸಂಬಂಧಿಸಿದೆ. ಆದ್ದರಿಂದ ಅದರ ಹೆಸರು ಇಂದೂಧರ್ಮ ಎಂದು ಕರೆಯಲ್ಪಟ್ಟಿದೆ. ಇಂದೂ ಎನ್ನುವ ಪದವೊಂದರ ಅರ್ಥ ದೈವಜ್ಞಾನವೆಂದು ತಿಳಿಯಬೇಕು. ಆದಿನ ಭೂಮಿ ಮೇಲೆ ಇಂದೂ ಧರ್ಮವಲ್ಲದೆ ಯಾವ ಮತ ಧರ್ಮವೂ ಇಲ್ಲ. ಇಂದೂ ಧರ್ಮ ಕೆಲವರಂದುಕೊಂಡಂತೆ ಮತಧರ್ಮವಲ್ಲ. ಅದು ದೈವ ಧರ್ಮ. ದೈವ ಧರ್ಮ ಶರೀರದೊಂದಿಗಿರುವ ಪ್ರತಿ ಮನುಷ್ಯನಿಗೂ ಸಂಬಂಧಿಸಿರುವುದು. ಆದ್ದರಿಂದ ಇಂದೂ ಧರ್ಮ ಒಂದು ವರ್ಗಕ್ಕಾಗಲಿ, ಒಂದು ಮತಕ್ಕಾಗಲಿ ಸಂಬಂಧಿಸಿರುವುದಲ್ಲ. ಈ ದಿನ ಭೂಮಿ ಮೇಲೆ ಎಷ್ಟು ಮತಗಳು ಇದ್ದರೂ, ಪ್ರತಿ ಮತದವರಿಗೂ ದೇವರ ಮೇಲೆ ನಂಬಿಕೆ, ಭಕ್ತಿ, ಪ್ರಾರ್ಥನೆಗಳು, ಆರಾಧನೆಗಳು ಇವೆ. ಯಾವ ಮತದವರಾದರೂ ದೇವರನ್ನು ಕುರಿತ ಜ್ಞಾನವನ್ನು ತಿಳಿಸುವ ಗ್ರಂಥವನ್ನು ಹೊಂದಿದ್ದಾರೆ. ಯಾವ ಮತದಲ್ಲಾದರೂ ದೇವರ ಜ್ಞಾನವಿರುವುದರಿಂದ ಆ ಮತದಲ್ಲಿ ಇಂದೂ ಧರ್ಮವಿದೆಯೆಂದೆ ಹೇಳಬೇಕು. ಪೂರ್ವದಲ್ಲಿ ದೇವರು ಹೇಳಿದ ಧರ್ಮ ದೈವಜ್ಞಾನದಿಂದ ಕೂಡಿಕೊಂಡಿರುವುದರಿಂದ, ಭೂಮಿ ಮೇಲೆ ಎಷ್ಟೋ ಮನುಷ್ಯರು ಬದಲಾದರೂ ದೇವರು ಬದಲಾಗುವುದಿಲ್ಲ, ದೇವರ ಧರ್ಮ ಬದಲಾಗದು. ಆದ್ದರಿಂದ ಅಂದಿಗೂ ಇಂದಿಗೂ ದೇವರ ಧರ್ಮ

(ಇಂದೂಧರ್ಮ) ಬದಲಾಗದಂತೆ ಇದೆಯೆಂದು ಹೇಳಬಹುದು. ಕಾಲಕ್ರಮೇಣ ಎಷ್ಟೋ ಮತಗಳು ಹುಟ್ಟಿಬಂದರೂ, ಆ ಮತಗಳ ಹೆಸರುಗಳು ಎಷ್ಟೋ ವಿಧಗಳಾಗಿದ್ದರೂ, ಎಲ್ಲ ಮತಗಳಲ್ಲಿನ ಮನುಷ್ಯರಿಗು ದೇವರ ಧರ್ಮವಾದ ಇಂದೂ ಧರ್ಮವೆ ಅನ್ವಯಿಸುತ್ತದೆ. ಒಬ್ಬ ಮನುಷ್ಯನಿಗೆ ಹೆಸರು, ಕುಲ, ಮತ ಏನಿದ್ದರೂ ಮನುಷ್ಯನಿಗೆ ಮಾತ್ರ ಒಂದೇ ದೇವರ ಧರ್ಮವಿರುತ್ತದೆ. ಅದೇ ಇಂದೂ ಧರ್ಮ. ದೇವರ ಧರ್ಮ ಇಂದೂ ಧರ್ಮವಾದರೆ ಕೆಲವು ಮತದವರು ತಮ್ಮದು ಇಂದೂ ಧರ್ಮವೆಂದು ಹೇಳದೆ ತಮ್ಮದು ಇಸ್ಲಾಮ್ ಧರ್ಮವೆಂದೊ, ಕ್ರೈಸ್ತ ಧರ್ಮವೆಂದೋ ಹೇಳುತ್ತಿರುತ್ತಾರಲ್ಲ! ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ!

ನೇರವಾಗಿ ಹೇಳಬೇಕೆಂದರೆ ಮೊದಲಿನಿಂದ ಇದ್ದ ಇಂದೂ ದೇಶದಲ್ಲಿನ ಇಂದೂಗಳೆ ನಾವು ಇಂದೂಗಳಲ್ಲ, ಹಿಂದೂಗಳು ಎಂದು ಹೇಳುತ್ತಿರುವಾಗ ಮಧ್ಯೆದಲ್ಲಿ ಬಂದ ಇತರೆ ಮತದವರು ಬೇರೆ ಹೆಸರು ಹೇಳುವುದರಲ್ಲಿ ಆಶ್ಚರ್ಯವೇನು ಇಲ್ಲ. ಇಂದೂ ಧರ್ಮ ಸ್ವಲ್ಪ ಹಿಂದೂಮತವಾದಾಗ ನಂತರ ಹುಟ್ಟಿದ ಮತಗಳು ಪ್ರತ್ಯೇಕವಾದ ಹೆಸರು ಹೇಳಿಕೊಳ್ಳುವುದರಲ್ಲಿ ತಪ್ಪಿಲ್ಲ. ಆದರೇ ಎಲ್ಲ ಮತದವರು ಗಮನಿಸಬೇಕಾದ ವಿಷಯವೇನೆಂದರೆ, ಯಾರು ಯಾವ ಮತಸ್ಥರಾದರೂ ಆಗಿರಬಹುದು, ಅವರು ಆ ಮತದ ಹೆಸರೇ ಹೇಳಬಹುದು, ಆದರೇ ಎಲ್ಲ ಮತದವರಿಗು ದೇವರು ಒಬ್ಬನಿದ್ದಾನೆ, ಆತನಿಗೆ ಸಂಬಂಧಿಸಿದ ಧರ್ಮ ಒಂದಿದೆ. ಎಲ್ಲ ಮತದವರು ಅವರ ಧರ್ಮದ ಪ್ರಕಾರ ದೇವರನ್ನು ಕುರಿತು ಹೇಳುತ್ತಿದ್ದಾರಲ್ಲವೆ! ಅವರು ದೇವರನ್ನು ಕುರಿತು ಜ್ಞಾನರೂಪವಾಗಿ ಹೇಳುವ ಧರ್ಮಯಾವುದಾದರೆ ಇದೆಯೊ ಅದನ್ನೇ ಇಂದೂಧರ್ಮ ಎನ್ನುತ್ತಿದ್ದೇವೆ. ಎಲ್ಲ ಮತಗಳಲ್ಲಿಯೂ ದೇವರು ಎನ್ನುವ ಪದ ಬದಲಾಗದಂತಿರುತ್ತದೊ, ಅದೇ ರೀತಿ ಧರ್ಮದ ಹೆಸರು ಇಂದೂ ಎನ್ನುವುದು ಸಹ ಬದಲಾಗದು. ಆದ್ದರಿಂದ ಯಾವ ಮತದಲ್ಲಾದರೂ ಅಲ್ಲಿ ದೇವರನ್ನು ಕುರಿತು ಹೇಳುವ ಧರ್ಮದ ಹೆಸರು ಇಂದೂಧರ್ಮ ಎಂದು ಹೇಳಬೇಕು.

ಇಂದೂಧರ್ಮ ಒಂದು ಮತಕ್ಕೆ ಪರಿಮಿತಿಯಾದುದಲ್ಲ. ದೇವರು ಹೇಗೆ ಎಲ್ಲ ಮತಗಳಿಗು ಸಂಬಂಧಿಸಿದವನೊ ಹಾಗೆ ಇಂದೂಧರ್ಮ ಎಲ್ಲ ಮತಗಳಿಗು ಸಂಬಂಧಿಸಿರುವುದೆ ಆಗುತ್ತದೆ.

ದೇವರು ಸೃಷ್ಠಿ ಆದಿಯಲ್ಲಿಯೇ ಹೇಳಿದ ತನ್ನ ಧರ್ಮ ಇಂದೂಧರ್ಮ. ಭೂಮಿ ಮೇಲೆ ಎಷ್ಟು ಮತಗಳು ಬಂದರೂ ಮೊದಲು ಸೃಷ್ಠಿಯನ್ನು ತಯಾರು ಮಾಡಿದ ದೇವರು ಬದಲಾಗುವುದಿಲ್ಲ. ಹಾಗೇ ಆತನ ಇಂದೂ ಧರ್ಮವೂ ಸಹ ಬದಲಾಗುವುದಿಲ್ಲ. ದೇವರಿಗೆ ಎಂದಿಗೂ ಹೆಸರು ಇರುವುದಿಲ್ಲ. ಹಾಗೇ ದೇವರ ಧರ್ಮಕ್ಕೂ ಹೆಸರು ಇರುವುದಿಲ್ಲ. ಇಂದೂ ಎನ್ನುವುದು ಹೆಸರಲ್ಲ. ಇಂದೂ ಎಂದರೆ ದೇವರ ಜ್ಞಾನಕ್ಕೆ ಗುರುತು. ದೇವರ ಧರ್ಮವನ್ನು ಕುರಿತು ಹೇಳುವಾಗ ಇಂದೂ ಧರ್ಮವೆಂದು ಹೇಳಬೇಕು. ದೇವರ ಧರ್ಮಕ್ಕೆ ಭೂಮಿ ಮೇಲೆ ಗುರುತು ಚಂದ್ರನು ಆದ್ದರಿಂದ ದೇವರ ಧರ್ಮದ ಮುಂದೆ ಚಂದ್ರನನ್ನು ಇಂದೂ ಎಂದು ಹೇಳುತ್ತಾ ಇಂದೂಧರ್ಮವೆನ್ನಬೇಕು. ದೇವರ ಧರ್ಮವನ್ನು ಎಂದಿಗೂ ದೇವರ ಧರ್ಮವೆಂದು ಹೇಳಬಾರದು. ಹಾಗೆ ಹೇಳಿದರೆ ದೇವರನ್ನು ಪರಿಮಿತಿ ಮಾಡಿ ಹೇಳಿದಂತಾಗುತ್ತದೆ. ದೇವರು ಪರಿಮಿತಿಯಿಲ್ಲದವನು. ದೇವರನ್ನು ಕುರಿತು ಖಚಿತವಾಗಿ ಯಾವ ಧರ್ಮವು ಹೇಳುವುದಿಲ್ಲ. ಆತನನ್ನು ಕೆಲವು ಸಂಧರ್ಭಗಳಲ್ಲಿ ಧರ್ಮಾತೀತನು ಎಂದು ಹೇಳಬೇಕಾಗಿರುತ್ತದೆ. ಆದ್ದರಿಂದ ದೇವರ ಧರ್ಮವನ್ನು ಇಂದೂಧರ್ಮವೆಂದು ಹೇಳಬೇಕು. ದೇವರ ಧರ್ಮವೆಂದು ಹೇಳಿದರೆ ದೇವರು ಧರ್ಮಕ್ಕೆ ಕಟ್ಟುಬಿದ್ದವನಂತೆ ಲೆಕ್ಕಹಾಕಬೇಕಾಗುತ್ತದೆ. ಆತನು ಒಂದು ವಿಧವಾಗಿ ಯಾವುದಕ್ಕು ಕಟ್ಟು ಬೀಳುವವನಲ್ಲ. ಆದ್ದರಿಂದ ದೇವರ ಧರ್ಮವೆಂದು ಹೇಳಬೇಕಾದ ಸಂಧರ್ಭದಲ್ಲಿ ಇಂದೂಧರ್ಮವೆಂದು ಹೇಳಬೇಕು. ಆದರೆ ಕೆಲವರು ಇತರೆ ಮತದವರು ದೇವರ ಧರ್ಮವೆಂದು ಹೇಳಬೇಕಾದ ಕಡೆಯೆಲ್ಲ ಇಸ್ಲಾಮ್ ಧರ್ಮವೆಂದೊ, ಇಲ್ಲವೆ ಕ್ರೈಸ್ತ ಧರ್ಮವೆಂದೊ ಹೇಳಬಹುದಲ್ಲವೆ! ಇಂದೂ ಧರ್ಮವೆಂದೇ ಏಕೆ ಹೇಳಬೇಕು ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ!

ಪ್ರತಿ ಮನುಷ್ಯನಿಗೂ ನಿವಾಸ ಮಾಡುವುದಕ್ಕೆ ಭೂಮಿ ಅವಶ್ಯ, ಹಾಗೆ ಪ್ರಕೃತಿ ಅವಶ್ಯ, ಪ್ರಕೃತಿಯಲ್ಲಿನ ಸೂರ್ಯಚಂದ್ರರು ಅವಶ್ಯ. ಪ್ರಕೃತಿಯಲ್ಲಿನ ಸೂರ್ಯಚಂದ್ರರು ಎಲ್ಲರಿಗು ಸಂಬಂಧಿಸಿದವರೆಯಾಗಲಿ ಪ್ರತ್ಯೇಕಿಸಿ ಯಾವ ಮತಕ್ಕು ಸಂಬಂಧಿಸಿದವರಲ್ಲ. ಭೂಮಿ ಮೇಲೆ ಮನುಷ್ಯರೆಲ್ಲರಿಗೂ ಚಂದ್ರನು ಸಮಾನವಾಗಿ ಇದ್ದಾನೆ. ಚಂದ್ರನು ಹಿಂದೂಮತಕ್ಕೆ ಸಂಬಂಧಿಸಿದವನೆಂದಾಗಲಿ, ಇಸ್ಲಾಮ್ ಮತಕ್ಕೆ ಸಂಬಂಧಿಸಿದವನೆಂದಾಗಲಿ ಇಲ್ಲ ತಾನೆ! ಆದ್ದರಿಂದ ಭೂಮಿ ಮೇಲೆ ಒಂದು ಮತಕ್ಕು ಸಂಬಂಧವಿಲ್ಲದ ಚಂದ್ರನ ಹೆಸರಿನಿಂದ ಚಂದ್ರಧರ್ಮವೆಂದು (ಇಂದೂಧರ್ಮವೆಂದು) ಹೇಳುವುದರಲ್ಲಿ ತಪ್ಪಿಲ್ಲ. ಧರ್ಮ ಮತವಲ್ಲ, ಹಾಗೆ ಮತವು ಸಹ ಧರ್ಮವಲ್ಲ. ಮತಗಳು ಎಷ್ಟಿದ್ದರೂ ಎಲ್ಲವುಗಳಿಗು ಅಧಿಪತಿ ದೈವ ಒಬ್ಬನೆ ಆದಂತೆ ಮತಗಳು ಎಷ್ಟಿದ್ದರೂ ಎಲ್ಲವುಗಳಿಗೂ ದಾರಿ ತೋರಿಸುವ ಧರ್ಮ ಒಂದೇ ಎಂದು ಹೇಳಬಹುದು. ಭೂಮಿ ಮೇಲೆ ಎಷ್ಟೋ ಮತಗಳಿದ್ದರೂ ಎಲ್ಲವುಗಳಿಗು ಗಮ್ಯವು ದೇವರೆ, ಮಾರ್ಗ ಧರ್ಮವೆ. ಇಲ್ಲಿನ ಸಮಸ್ಯೆಯೆಲ್ಲಾ ಮನುಷ್ಯರೆಲ್ಲರಿಗೂ ಅವರವರ ಮತಗಳು ತಿಳಿದಿವೆ, ಆದರೇ ಎಲ್ಲರಿಗೂ ಒಂದೇ ವಿಧವಾಗಿ ಇರುವ ದೈವ ತಿಳಿದಿಲ್ಲ, ಆತನ ಧರ್ಮಗಳನ್ನು ತಿಳಿದಿಲ್ಲ. ಪ್ರತಿ ಮತದಲ್ಲಿಯು ಧರ್ಮಗಳನ್ನು ತಿಳಿಸುವ ಜ್ಞಾನವಿದೆ. ಪ್ರತಿ ಮತಕ್ಕು ದೇವರು ತನ್ನ ಧರ್ಮಗಳನ್ನು ತಿಳಿದುಕೊಳ್ಳುವುದಕ್ಕೆ ಒಂದು ಗ್ರಂಥವನ್ನು ಕೊಟ್ಟಿದ್ದಾನೆ. ಪ್ರತಿ ಮತದಲ್ಲಿನ ಗ್ರಂಥದಲ್ಲಿ ಪವಿತ್ರವಾದ ದೇವರ ಧರ್ಮಗಳು ತಿಳಿಸಲಾಗಿದೆ. ಒಂದು ಹಿಂದೂಮತದಲ್ಲಿ ಧರ್ಮಗಳಿವೆಯೆಂದು, ನಂತರ ಬಂದ ಕ್ರೈಸ್ತ, ಇಸ್ಲಾಮ್ ಗ್ರಂಥಗಳಲ್ಲಿ ಧರ್ಮಗಳು ಇಲ್ಲ ಎಂದು ಹೇಳುವುದಕ್ಕೆ ಅವಕಾಶವಿಲ್ಲ. ಪ್ರತಿ ಮತದಲ್ಲಿಯು ಸಾಂಪ್ರದಾಯಗಳನ್ನು ಕೆಲವನ್ನು ಆ ಮತಸ್ಥರು ಕಲ್ಪಿಸಿಕೊಂಡು ಇರಬಹುದು. ಅವರ ಸಾಂಪ್ರದಾಯಗಳ ಪ್ರಕಾರ ಅವರು ಬೇರೆ ಮತಸ್ಥರಾಗಿ ಕಾಣಿಸಬಹುದು. ಅಷ್ಟು ಮಾತ್ರಕ್ಕೆ ಅವರ ಧರ್ಮಬೇರೆ ಅಲ್ಲ, ಹಾಗೆ ಅವರ ದೇವರು ಬೇರೆ ಅಲ್ಲ. ದೇವರು ಸೃಷ್ಠಿ ಆದಿಯಲ್ಲಿ ತಿಳಿಸಿದ ಜ್ಞಾನವೆ ಅಥವಾ ಇಂದೂಧರ್ಮವೆ ಎಲ್ಲ ಮತಗಳ ಮೂಲಗ್ರಂಥದಲ್ಲಿ ಇದೆ.

ಆದ್ದರಿಂದ ಎಂದಿಗೂ ದೇವರು ಬದಲಾಗುವವನಲ್ಲ, ದೇವರ ಧರ್ಮ ಬದಲಾಗುವುದಿಲ್ಲವೆಂದು ಧೈರ್ಯವಾಗಿ ಹೇಳಬಹುದು.

ಪ್ರತಿಯೊಂದು ಮತದವರು ತಮ್ಮ ಗ್ರಂಥದಲ್ಲಿ ಹೇಳಿದ ಜ್ಞಾನ ಸರ್ವಮಾನವರಿಗು ಸಂಬಂಧಿಸಿದೆಯೆಂದು, ಒಂದು ಮತಕ್ಕೆ ಪರಿಮಿತವಾಗಿರುವುದಲ್ಲವೆಂದು ಹೇಳುತ್ತಿರುತ್ತಾರೆ. ಅವರು ಹೇಳಿದರೂ ಹೇಳದೇ ಹೋದರೂ ಆ ಮಾತು ವಾಸ್ತವವೆಂದೇ ಹೇಳಬಹುದು. ಆದರೇ ಅವರು ಹಾಗೆ ಹೇಳಿದರೂ ಅದು ಹೊರಗಿನವರಿಗೆ ಹೇಳುವ ಮಾತಿನಂತೆ ಇರುತ್ತದಾಗಲಿ, ಅವರ ಮನಸ್ಸಿನಲ್ಲಿ ಮಾತ್ರ ತಮ್ಮ ಗ್ರಂಥದಲ್ಲಿ ಹೇಳಿರುವವು ತಮ್ಮ ಮತಕ್ಕೆ ಸಂಬಂಧಿಸಿರುವವೆಯೆಂಬ ಭಾವವಿರುತ್ತದೆ. ಹೇಳಲ್ಪಟ್ಟಿರುವ ಧರ್ಮ ಸಮಸ್ತ ಮಾನವರಿಗೂ ಅನ್ವಯಿಸುತ್ತದೆಂದು ಮೂಲಗ್ರಂಥಗಳಲ್ಲಿ ಇರುವುದರಿಂದ, ಅದರ ಪ್ರಕಾರ ಅವರು ಹಾಗೆ ಹೇಳುತ್ತಿದ್ದಾರೆ ಹೊರತು, ಅವರ ಹೃದಯದಲ್ಲಿ ಮಾತ್ರ ತಾವು ಬೇರೆಯೆಂದು, ತಮ್ಮ ಮತ ಬೇರೆಯೆಂದು, ತಮ್ಮ ಧರ್ಮ ಬೇರೆಯೆಂದು ಅಂದುಕೊಳ್ಳುತ್ತಾರೆ. ನಾನು ಸ್ವತಃವಾಗಿ ಒಂದು ಮತಕ್ಕೆ ಸಂಬಂಧಿಸಿದ ಮತ ಹಿರಿಯರೊಂದಿಗೆ ಸೇರಿ ಮಾತನಾಡಿದಾಗ ಅವರ ಹೃದಯಗಳಲ್ಲಿನ ಭಾವ ಹೊರಬಿದ್ದಿತು. ಅವರ ಧರ್ಮಗಳನ್ನು ಆಚರಿಸಬೇಕೆಂದರೂ, ಅವರ ಗ್ರಂಥದಲ್ಲಿನ ಧರ್ಮಗಳನ್ನು ಒಪ್ಪಿಕೊಂಡರೂ, ಅವರ ಮತದಲ್ಲಿ ಸೇರಬೇಕೆಂದು ಅವರು ಹೇಳುವುದನ್ನು ನೋಡಿದರೆ, ಅವರ ಆಲೋಚನೆಯೆಲ್ಲವು ತಮ್ಮ ಮತವನ್ನು ಬೆಳೆಸಿಕೊಳ್ಳಬೇಕೆಂಬುದನ್ನು ಹೊರತುಪಡಿಸಿ ದೇವರ ಧರ್ಮವನ್ನು ಹೊರಗಡೆ ತಿಳಿಸಬೇಕೆಂಬುದಿಲ್ಲ. ಈ ವಿಧವಾಗಿ ನಾನು ಮುಖ್ಯವಾಗಿ ಎರಡು ಮತದವರನ್ನು ನೋಡಿದ್ದೇನೆ. ಆ ಎರಡು ಮತಗಳೆಂದೆ ಅಲ್ಲ, ವಾಸ್ತವಕ್ಕೆ ಎಲ್ಲಾ ಮತಗಳು ಅವರವರ ಮತವನ್ನು ಬೆಳೆಸಿಕೊಳ್ಳಬೇಕೆಂದು ನೋಡುತ್ತಿವೆ, ಆದರೆ ಅವರ ಮತ ಗ್ರಂಥದಲ್ಲಿನ ಧರ್ಮಗಳನ್ನು ಅವರು ಗ್ರಹಿಸುತ್ತಿಲ್ಲ. ಆದರೆ ಒಂದು ಹಿಂದೂಮತದವರು ಮಾತ್ರ ತಮ್ಮ ಮತವನ್ನು ಬೆಳೆಸಿಕೊಳ್ಳಬೇಕೆಂಬ ವಿಷಯ ಪಕ್ಕಕ್ಕಿಟ್ಟು, ತಮ್ಮ ಮತವನ್ನು ರಕ್ಷಿಸಿಕೊಳ್ಳುವ ಕೆಲಸದಲ್ಲಿ ಲೀನವಾಗಿದ್ದಾರೆ.

ತಮ್ಮ ಹಿಂದೂಮತವನ್ನು ಇತರೆ ಮತಗಳು ಆಕ್ರಮಿಸಿಕೊಳ್ಳುತ್ತಿವೆಯೆಂದು, ಹಾಗೆ ನಡೆಯದಂತೆ ನೋಡಿಕೊಳ್ಳಬೇಕೆಂದು ಕೆಲವರು ಪ್ರಯತ್ನಿಸುತ್ತಿರುವಾಗ, ಕೆಲವರು ಸ್ವಮತ ರಕ್ಷಣೆ ಎನ್ನುವ ಹೆಸರನ್ನು ಅಡ್ಡ ಇಟ್ಟುಕೊಂಡು ಅಕ್ರಮಗಳು ಮಾಡುತ್ತಿದ್ದಾರೆ.

ನನಗೆ ತಿಳಿದ ಒಂದು ಸಂಘಟನೆಯನ್ನು ವಿವರಿಸುತ್ತೇನೆ ನೋಡಿರಿ. ಹಿಂದೂ ಮತದಲ್ಲಿದ್ದ ಒಬ್ಬ ವ್ಯಕ್ತಿ ತನ್ನದು ಕಡಿಮೆ ಕುಲವೆಂದು ತಿಳಿದು, ಕ್ರೈಸ್ತಮತದಲ್ಲಿ ಸೇರಿದನು. ಆತನು ಇಂದೂ ಧರ್ಮಗಳನ್ನು ಬೋಧಿಸುವ ನಮ್ಮ ಭಕ್ತರ ಮೇಲೆ ದ್ವೇಷ ಬೆಳೆಸಿಕೊಂಡನು. ಆತನು ಕ್ರೈಸ್ತಮತದಲ್ಲಿ ಸೇರಿದರೂ ಸೇರದಂತೆ ನಟಿಸುತ್ತಾ, ತಾನು ಹಿಂದೂವೆಂದೆ ಹೇಳಿಕೊಳ್ಳುತ್ತಾ, ಕೆಲವು ಹಿಂದೂಧರ್ಮ ರಕ್ಷಣೆ ಸಂಸ್ಥೆಗಳೊಂದಿಗೆ ಪರಿಚಯಗಳನ್ನು ಬೆಳೆಸಿಕೊಂಡನು. ತಾನು ಕಡಿಮೆ ಕುಲದಲ್ಲಿರುವುದರಿಂದ ಹಿಂದೂಗಳು ತನ್ನನ್ನು ಗೌರವಿಸಲಿಲ್ಲವೆಂದು ಕ್ರೈಸ್ತಮತದಲ್ಲಿ ಸೇರಿದ ಅವನು ಒಂದು ನಿರ್ಣಯಕ್ಕೆ ಬಂದನು. ತಾನು ಕ್ರೈಸ್ತಮತದಲ್ಲಿ ಸೇರಿದಂತಾಗಲಿ, ತಾನು ಕ್ರೈಸ್ತನೆಂಬ ವಿಷಯವನ್ನಾಗಲಿ ಯಾರಿಗು ತಿಳಿಯದಂತೆ ಹಿಂದೂವಿನಂತಿದ್ದೂ, ಹಿಂದೂಗಳೊಂದಿಗೆ ಬೆರೆತು ಹೋಗಿ, ತಾನು ಸಹ ಹಿಂದೂಮತ ಅಭಿಮಾನಿಯೆಂದು ಹಿಂದೂಗಳನ್ನು ನಂಬಿಸಿ, ಹಿಂದೂಗಳಲ್ಲಿ ಕಿಚ್ಚು ಇಡಬೇಕೆಂದುಕೊಂಡನು. ಆ ಉದ್ದೇಶದಿಂದಿರುವ ಅವನು ನಮ್ಮ ಬೋಧನೆಗಳು ಹಿಂದೂಗಳಿಗೆ ಜ್ಞಾನವನ್ನು ತಿಳಿಸಿ ಹಿಂದೂ ಮತಕ್ಕೆ ಬಲವನ್ನು ಹೆಚ್ಚಿಸುತ್ತವೆಂದುಕೊಂಡಿದ್ದಾನೆ. ನಮ್ಮ ಜ್ಞಾನವನ್ನು ಹೇಳುವವರನ್ನು ತಡೆಯಬೇಕೆಂದುಕೊಂಡನು. ಅದಕ್ಕೆ ತಕ್ಕ ಆಲೋಚನೆ ಮಾಡಿ ಹಿಂದೂಮತ ರಕ್ಷಕರೆಂದು ಹೆಸರು ಇಟ್ಟುಕೊಂಡವರನ್ನು ನಮ್ಮ ಮೇಲೆ ಉರಿದುಂಬಿಸಿ ಕಳುಹಿಸಬೇಕೆಂದುಕೊಂಡನು. ಅದರಲ್ಲಿ ಭಾಗವಾಗಿ ನಾವು ಹೇಳುವುದು ಪರಮತ ಬೋಧನೆಗಳೆಂದು, ಆ ವಿಷಯ ತನಗೆ ಚೆನ್ನಾಗಿ ಗೊತ್ತಿದೆಯೆಂದು, ಮತ ರಕ್ಷಕರೆನ್ನುವ ಅವರಿಗೆ ಹೇಳಿ ರೊಚ್ಚಿಗೇಳಿಸಿದನು. ನಮ್ಮ ಪುಸ್ತಕಗಳಲ್ಲಿನ ಜ್ಞಾನ ಊಟಕ್ಕೆ ಬಿಡಿಸಿದ ಎಲೆಯಂತದ್ದು. ಆದ್ದರಿಂದ ಕೆಲವರಿಗೆ ನಾವು ಹೇಳುವ

ಬೋಧನೆಗಳು ಹಿಂದೂ ಜ್ಞಾನಕ್ಕೆ ಸಂಬಂಧಿಸಿರುವವೆಂದು, ಪ್ರಬೋಧಾನಂದ ಯೋಗೀಶ್ವರರು ಹಿಂದೂ ಧರ್ಮ ಸಿದ್ಧಾಂತಕರ್ತನೆಂದು ತಿಳಿದಿರುವುದರಿಂದ ಆತನ ಮಾತುಗಳನ್ನು ಅವರು ನಂಬಲಿಲ್ಲ. ಅಂತಹ ಸಮಯದಲ್ಲಿ ಮತರಕ್ಷಣೆ ಹೆಸರನ್ನು ಅಡ್ಡ ಇಟ್ಟುಕೊಂಡು ಅಕ್ರಮಗಳನ್ನು ಮಾಡುವವರನ್ನು ಆತನು ಬೇಟಿ ಮಾಡಿ ನಮ್ಮ ಭಕ್ತರ ಮೇಲೆ ದಾಳಿ ಮಾಡಲು ಹೇಳಿದ್ದಾನೆ. ಮತವನ್ನು ಅಡ್ಡ ಇಟ್ಟುಕೊಂಡು ಕೆಟ್ಟ ಕೆಲಸಗಳನ್ನು ಮಾಡುವವರನ್ನು ಆತನು ಬೇಟಿಯಾಗಿರುವುದರಿಂದ ಅವರಿಗೆ ಸ್ವಲ್ಪ ಹಣ ಕೊಟ್ಟು ದಾಳಿ ಮಾಡುವುದಕ್ಕೆ ಉರಿದುಂಬಿಸಿದನು. ಅಕ್ರಮಾರ್ಕರಾದ ಮತ ರಕ್ಷಣೆ ಕಾರ್ಯಕರ್ತರೆನ್ನುವವರು 9 ಜನ ಆತನ ಹತ್ತಿರ 50 ಸಾವಿರ ಹಣ ತೆಗೆದುಕೊಂಡು ಹೊರಗೆ ಬಾಡಿಗೆ ಮನುಷ್ಯರನ್ನು 16 ಜನರನ್ನು ಒಬ್ಬೊಬ್ಬರಿಗೆ 500 ಕೊಡುತ್ತೇವೆಂದು ಕರೆದುಕೊಂಡು ಒಟ್ಟು 25 ಜನ ಒಂದೇ ಬಾರಿ ರಾತ್ರಿ ಹೊತ್ತು 8.30 ಗಂಟೆಗಳ ಸಮಯದಲ್ಲಿ ನಮ್ಮ ಪ್ರೆಸ್ ಮೇಲೆ ದಾಳಿ ನಡೆಸಿದರು. ಪ್ರತಿ ದಿನ ಕನಿಷ್ಠ ಏಳು ಇಲ್ಲವೆ ಎಂಟು ಜನ ಆ ಸಮಯದಲ್ಲಿ ಅಲ್ಲಿರುತ್ತಿದ್ದರು. ಆದರೆ ಆ ದಿನ ಒಬ್ಬರು ಮಾತ್ರ ಅಲ್ಲಿ ಆ ಸಮಯಕ್ಕೆ ಇದ್ದುದರಿಂದ ಎಲ್ಲರು ಆತನ ಮೇಲೆ ದಾಳಿ ಮಾಡಿ ಹೊಡೆದು ಹೋಗಿದ್ದರು. ಯಾರೊ ಕ್ರಿಷ್ಟಿಯನ್ ಚರ್ಚಿನವರು ಬರೆದ ವ್ಯಾಸವಿರುವ ಪೇಪರು ತಂದು ಆತನಿಗೆ ತೋರಿಸಿ ಈ ಪೇಪರು ನೀವೇ ಪ್ರಚಾರಿಸಿದ್ದೀರೆಂದು ಹೊಡೆಯುವುದು ನಡೆದಿದೆ. ಆ ಪೇಪರಿನಲ್ಲಿ ಬರೆದವರ ಅಡ್ರಸ್ ಎಲ್ಲಾ ಇದ್ದರೂ, ಅದನ್ನು ಪ್ರಕಟಿಸಿರುವುದು ನಾವಲ್ಲವೆಂದು ತಿಳಿದರೂ, ಅವರು ಆ ವಿಧವಾಗಿ ಮಾಡಿರುವುದರಿಂದ ಅದು ಉದ್ದೇಶಪೂರ್ವಕವಾಗಿ ಮಾಡಿದ ದಾಳಿಯೆಂದು ನಮಗೆ ಅರ್ಥವಾಯಿತು. ಈ ವಿಧವಾಗಿ ಹಣಕ್ಕಾಗಿ ಹಿಂದೂಧರ್ಮವನ್ನು ತಿಳಿಸುವವರ ಮೇಲೆಯೆ ದಾಳಿ ಮಾಡುವವರು ಹಿಂದುಗಳಾಗುತ್ತಾರಾ? ಹಿಂದೂ ಮತ ರಕ್ಷಕರಾಗುತ್ತಾರಾ? ನಾವು ರಚಿಸಿದ 50 ಗ್ರಂಥಗಳು ಹೊರಗಡೆ ಎಲ್ಲರ ಹತ್ತಿರವು ಇವೆ. ಎಲ್ಲರಿಗು ಕಾಣಿಸುವಂತೆ ಪ್ರೆಸ್‌ನಲ್ಲಿ ಇಡಲಾಗಿದೆ. ನಾವು ಎಲ್ಲಾದರೂ ಹಿಂದೂ ಧರ್ಮಗಳನ್ನು ಹೇಳದೆ

ಬೇರೆ ಮತಗಳನ್ನು ಕುರಿತು ಬರೆದಿದ್ದರೆ ಆ ಪುಸ್ತಕದಲ್ಲಿ ತೋರಿಸಿ ಕೇಳಬಹುದಲ್ಲವೆ! ದಾಳಿ ಮಾಡಬೇಕಾದ ಅವಶ್ಯಕವೇನಿದೆ!

ಇಲ್ಲಿಯವರೆಗೂ ಹಿಂದೂ ಗುರುಗಳು ಯಾರೂ ಮಾಡದ ಹಿಂದೂ ಧರ್ಮಪ್ರಚಾರವನ್ನು ನಾಲ್ಕು ವಾಹನಗಳೊಂದಿಗೆ 40 ಜನ ಮನುಷ್ಯರಿಂದ ಊರೂರು ತಿರುಗಿ ಪ್ರಚಾರ ಮಾಡುತ್ತಿದ್ದೇವೆ. ನಮ್ಮ ಬೋಧನೆಗಳನ್ನು ನೋಡಿ ಹಿಂದೂಗಳಾದವರು ಎಷ್ಟೋ ಸಂತೋಷಿಸುತ್ತಿದ್ದಾರೆ. ನಮ್ಮ ಬೋಧನೆಗಳನ್ನು ಕೇಳಿದವರು, ಓದಿದವರು ಮತ ಬದಲಾಯಿಸುವ ಪ್ರಸ್ಥಾಪವೇ ಇರುವುದಿಲ್ಲ. ಈ ವಿಧವಾಗಿ ಜ್ಞಾನವನ್ನು ಬೋಧಿಸಿ ಹಿಂದೂಗಳನ್ನು ಜ್ಞಾನಿಗಳಾಗಿ ಬದಲಾಯಿಸಿ, ಇಲ್ಲಿ ಇಲ್ಲದ ಜ್ಞಾನ ಎಲ್ಲಿಯೂ ಇಲ್ಲವೆಂದು ನಾವು ಹೇಳುತ್ತಿದ್ದೇವಾದ್ದರಿಂದ, ಹಿಂದೂಮತ ಚೆನ್ನಾಗಾದರೆ ನಮ್ಮಿಂದ ಒಳ್ಳೆಯದಾಗುತ್ತದೆ. ಹಾಗಲ್ಲದೆ ಹಿಂದೂ ಜ್ಞಾನವೇನೋ ತಿಳಿಯದವರು ಹಿಂದೂ ರಕ್ಷಕರೆಂದು ಹೆಸರು ಇಟ್ಟುಕೊಂಡರೆ ಹಿಂದೂ ಮತ ಸರಿಯಾಗುತ್ತದಾ? ಸಮಾಜದಲ್ಲಿ ಯಾವ ಗುರುತು ಇಲ್ಲದವರು ಹಿಂದೂಮತ ರಕ್ಷಕರೆಂದು ಹೆಸರು ಇಟ್ಟುಕೊಂಡು ಗುಂಪಾಗಿ ಇದ್ದು ಹಣ ಕಸಿದುಕೊಂಡು ಹಿಂದೂಗಳಾದ ನಮ್ಮ ಮೇಲೆ ದಾಳಿ ಮಾಡಿರುವುದಕ್ಕೆ ಇತರೆ ಮತದವರು ನಗಾಡಿದ್ದಾರೆ. ನಮ್ಮ ಜ್ಞಾನವನ್ನು ತಿಳಿದ ಹಿಂದೂಗಳು, ಅಂತಹ ಹಿಂದೂಗಳನ್ನು ದೂರ ಮಾಡಿಕೊಂಡಿದ್ದಾರೆ. ಎಷ್ಟೋ ಜನ ಹಿಂದೂಗಳು ಇದು ಹಿಂದೂ ಮತ ರಕ್ಷಕರೆನ್ನುವವರಿಗೂ ನಮಗೂ ನಡೆದ ಸಂಘಟನೆಯನ್ನು ಖಂಡಿಸುತ್ತಾ ಪತ್ರ ಬರೆಯುವುದು ನಡೆದಿದೆ. ಈ ವಿಧವಾಗಿ ಹಿಂದೂಮತದ ಮೇಲೆ ದ್ವೇಷವಿಟ್ಟುಕೊಂಡ ಒಬ್ಬ ಕ್ರೈಸ್ತನ ಕೈಯಲ್ಲಿ ಹಣಕ್ಕಾಗಿ ಕೀಲುಗೊಂಬೆಗಳಾಗಿ, ಹಿಂದೂಗಳನ್ನೇ ಹಿಂಸಿಸುವುದು ಹಿಂದೂ ಮತಕ್ಕೆ ದೊಡ್ಡ ಕೆಡಕೆಂದು ಹೇಳಬಹುದು. ಯಾರ ಮತವನ್ನು ಅವರು ಸಂರಕ್ಷಿಸಿಕೊಳ್ಳಬಹುದು, ಆದರೆ ಅದನ್ನು ಅಡ್ಡ ಇಟ್ಟುಕೊಂಡು ಹಿಂಸೆಗೆ ಪಾಲ್ಗೊಂಡರೆ ಅಂತವರನ್ನು ದೇವರು ಸಹ ಒಪ್ಪಿಕೊಳ್ಳುವುದಿಲ್ಲ.

ಮತ ದ್ವೇಷಗಳು ಮಾನವರ ನಾಶಕ್ಕೆ ದಾರಿ ಮಾಡಿಕೊಡುತ್ತವೆ. ಮತ ಎನ್ನುವುದು ಜ್ಞಾನವಲ್ಲ. ಮತ ಎನ್ನುವುದು ಮನುಷ್ಯನನ್ನು ದೇವರ ಕಡೆ ನಡೆಸುವುದಿಲ್ಲ. ಹಿಂದೂಮತದೊಳಗಿನವರು ಹೇಳಿಕೊಳ್ಳುವುದಕ್ಕೆ ಅವರಿಗೆ ದಾರಿ ತೋರಿಸುವುದಕ್ಕೆ ಭಗವಂತನು ಹೇಳಿದ ಭಗವದ್ಗೀತೆ ಗ್ರಂಥ ಇದೆ. ಅದರಲ್ಲಿ ಎಷ್ಟೋ ಉತ್ತಮವಾದ ಜ್ಞಾನವಿದೆ. ಅದನ್ನು ತಿಳಿದ ಹಿಂದೂಗಳು ಎಷ್ಟು ಜನ ಇದ್ದಾರೆಂದು ನೋಡಿದರೆ ಬಹು ಸ್ವಲ್ಪ ಜನ ಮಾತ್ರವೆಯೆಂದು ತಿಳಿಯುತ್ತಿದೆ. ಜ್ಞಾನ ತಿಳಿದವರು ಯಾರಾದರು ಕನಿಷ್ಠ ಒಬ್ಬರಾದರು ಹಿಂದೂ ಧರ್ಮರಕ್ಷಣೆ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ದುರದೃಷ್ಟವಶಾತ್ತು ಹಿಂದೂಮತ ರಕ್ಷಣೆ ಎಂದು ಹೆಸರು ಇಟ್ಟಿರುವ ಜಾಗದಲ್ಲಾಗಲಿ, ಹಿಂದೂ ಧರ್ಮರಕ್ಷಣೆ ಎಂದು ಹೆಸರು ಇಟ್ಟ ಜಾಗದಲ್ಲಾಗಲಿ ಹಿಂದೂ ಧರ್ಮಗಳು, ಹಿಂದೂ ಜ್ಞಾನ ತಿಳಿದವರು ಇಲ್ಲದಂತೆ ಹೋಗಿದ್ದಾರೆಂದು ಹೇಳಬಹುದು. ಅದರಿಂದ ಎಷ್ಟೋ ಅನರ್ಥಗಳು ನಡೆಯುತ್ತಿವೆಯೆಂದು ತಿಳಿಯುತ್ತಿದೆ. ಮತರಕ್ಷಣೆ ಎನ್ನುವ ಹೆಸರು ಇಟ್ಟುಕೊಂಡ ಜಾಗಗಳಲ್ಲೆಲ್ಲ ಪರಮತ ದ್ವೇಷ ಕಾಣಿಸುತ್ತಿದೆ. ಪರಮತವನ್ನು ದ್ವೇಷಿಸುವುದೇ ಮತರಕ್ಷಣೆಯ ಕಾರ್ಯವಾಗಿ ಇಟ್ಟುಕೊಂಡವರು ಬಹಳ ಜನ ಇದ್ದಾರೆ. ಒಂದು ಮತದಲ್ಲಿ ಪರಮತ ದ್ವೇಷ ಹುಟ್ಟಿದರೆ, ಇತರೆ ಮತದಲ್ಲಿಯು ಸಹ ಅದೇ ಸೂತ್ರದ ಪ್ರಕಾರ ಪರಮತವನ್ನು ದ್ವೇಷಿಸುವುದು ಪ್ರಾರಂಭವಾಗುತ್ತದೆ. ಅಲ್ಲಿಂದ ಪ್ರಾರಂಭವಾದ ದ್ವೇಷ ಮತರಕ್ಷಣೆಯನ್ನು ಪಕ್ಕಕ್ಕಿಟ್ಟು ಮನುಷ್ಯರ ವಿನಾಶಕ್ಕೆ ದಾರಿ ಮಾಡಿ ಕೊಡುತ್ತದೆ. ಒಂದು ಮತದೊಳಗಿನವರು ಕೆಲವರು ಮತದ್ವೇಷಕ್ಕೆ ಬಲಿಯಾಗಿ ಹೋದರೆ, ಆ ಮತದವರು ತಮ್ಮ ಮತದವರು ಪ್ರಾಣಗಳನ್ನು ಕಳೆದುಕೊಂಡಿರುವುದಕ್ಕೆ ಕಾರಣವಾದ ಮತದವರ ಮೇಲೆ ಕಕ್ಷೆ ತೀರಿಸಿಕೊಳ್ಳಲು ಏನಾದರು ಮಾಡಬೇಕೆಂದು, ಎಷ್ಟಕ್ಕಾದರೂ ತ್ಯಜಿಸಿ ತಮ್ಮ ಪ್ರಾಣಗಳನ್ನು ಕಳೆದುಕೊಂಡು ಇತರರ ಪ್ರಾಣಗಳನ್ನು ನೂರಾರು, ಸಾವಿರ ಸಂಖ್ಯೆಯಲ್ಲಿ ನಷ್ಟ ಹೋಗುವಂತೆ ಮಾಡುವರು. ಈ ವಿಧವಾಗಿ ಆಲೋಚಿಸಿದರೆ ವಿನಾಶವೊಂದು ಬಿಟ್ಟರೆ ಯಾರಿಗು ಏನು ಲಾಭವಿರುವುದಿಲ್ಲ.

ಮಾನವ ಸಮಾಜದಲ್ಲಿ ಯಾವ ಗುರುತು ಇಲ್ಲದವರು ತಮ್ಮ ಗರುತಿಗಾಗಿ ಏನೋ ಒಂದು ಮಾಡಬೇಕೆಂದು ನೋಡುತ್ತಿರುತ್ತಾರೆ. ಹೆಚ್ಚಾಗಿ ಕೆಡುಕಿನ ಕಡೆಗೆ ಹೋಗುತ್ತಿದ್ದಾರೆ. ಅಂತವರು ಮತ ಎನ್ನುವುದನ್ನು ಅಡ್ಡ ಇಟ್ಟುಕೊಂಡು ಕೆಲವರು ಉಗ್ರವಾದಿಗಳಂತೆ ತಯಾರಾಗುತ್ತಿದ್ದಾರೆ. ಕೆಲವರು ಉಗ್ರವಾದ ಎಂಬ ಹೆಸರು ಇಲ್ಲದಂತೆ ಉಗ್ರವಾದವನ್ನು ಸಾಗಿಸುತ್ತಿದ್ದಾರೆ. ಇದೆಲ್ಲಾ ನಾನು ಊಹಿಸಿ ಬರೆಯುತ್ತಿಲ್ಲ. ನಾನು ನೋಡಿದ ಅನುಭವಗಳನ್ನು ಹೇಳುತ್ತಿದ್ದೇನೆ. ಕೆಲವರಾದರೆ 'ಆಂಧ್ರಾ ತಾಲಿಬಾನ್' ಎಂದು ಹೆಸರು ತಂದುಕೊಂಡು ಹಿಗ್ಗಿದರೆ, ಮತ್ತೊಬ್ಬರು ಆಂಧ್ರಾ ಮೋಡಿ ಎಂದು ಗರ್ವದಿಂದ ಹೇಳಿಕೊಳ್ಳುತ್ತಿದ್ದಾರೆ. ಇಂತವರು ಸಮಾಜಕ್ಕೆ ಮೇಲು ಮಾಡುತ್ತಿದ್ದಾರೊ, ಕೀಳು ಮಾಡುತ್ತಿದ್ದಾರೊ ಸ್ವಲ್ಪವಾದರೂ ಆಲೋಚಿಸುತ್ತಿಲ್ಲ. ವಾಸ್ತವಕ್ಕೆ ಅವರು ಎಷ್ಟೋ ಜನ ಪ್ರಾಣಗಳೊಂದಿಗೆ ಚೆಲ್ಲಾಟವಾಡುತ್ತಿದ್ದಾರೊ ಅವರಿಗೆ ತಿಳಿದಿಲ್ಲ. ಅವರಿಂದ ಎಷ್ಟೋ ಜನ ಪ್ರಜೆಗಳು ಮಾಡದ ಅಪರಾದಕ್ಕೆ ಬಲಿಯಾಗಿ ಹೋಗುತ್ತಿದ್ದಾರೆ. ಮತದ್ವೇಷಗಳನ್ನು ಯಾವ ಕಾರಣಕ್ಕು ಒಪ್ಪಿಕೊಳ್ಳದ ನಾನು ಎದುರುಗಡೆಯ ಮತದವರನ್ನು ಗೌರವಿಸಿರಿ, ಆಗ ಅವರು ಸಹ ನಮ್ಮನ್ನು ಗೌರವಿಸುತ್ತಾರೆ ಎಂದು ಹೇಳುತ್ತಿರುತ್ತೇನೆ. ಅಂತಹ ನನ್ನೊಂದಿಗೆ ನಮ್ಮ ಭಾವಕ್ಕೆ ವಿರುದ್ಧವಾದವರು ಬೇಟಿಯಾಗುವುದು ನಡೆಯಿತು. ನನ್ನೊಂದಿಗೆ ಚೆನ್ನಾಗಿ ಪರಿಚಯವಿರುವ ವ್ಯಕ್ತಿ ಹಿಂದೂ ಪರಿರಕ್ಷಣೆ ಸಂಘ ಎಂಬ ಹೆಸರುಪಡೆದ ವ್ಯಕ್ತಿಗಳನ್ನು ಪರಿಚಯ ಮಾಡಿಸಿ ನನ್ನೊಂದಿಗೆ ಮಾತನಾಡುವ ಅವಕಾಶ ಕಲ್ಪಿಸಿದನು. ಆಗ ಅವರು ತಮ್ಮನ್ನು ಕುರಿತು ತಾವು ಹೇಳಿಕೊಳ್ಳುತ್ತಾ, ತಾವು ಹಿಂದೂಮತದವರನ್ನು ಕ್ರೈಸ್ತಮತದೊಳಗೆ ಹೋಗದಂತೆ ಮಾಡಿ ಹಿಂದೂಮತಕ್ಕೆ ಸೇವೆ ಮಾಡುವವರಂತೆ ಹೇಳಿದರು. ಅವರು ನನ್ನೊಂದಿಗೆ ಮಾತನಾಡಿದ ವಿಧಾನವನ್ನೆಲ್ಲ ವಿವರಿಸುತ್ತೇವೆ ನೋಡಿರಿ.

**ರಕ್ಷಣೆ ಸಂಘದವರು :–** ಇಲ್ಲಿ ಸಮುದ್ರ ತೀರ ಪ್ರಾಂತವಾಗಿರುವುದರಿಂದ, ಬಂದರು(ಹಡಗು ನಿಲ್ಲುವ ಸ್ಥಳ) ಇರುವುದರಿಂದ ಇತರ ದೇಶಗಳ ಕ್ರೈಸ್ತರ ಗುರುಗಳು ಬಂದು ಅವರು ಅಲ್ಲಲ್ಲಿ ಸಮಾವೇಶಗಳನ್ನಿಟ್ಟು, ಅವರ ಮತವನ್ನು

ಬೋಧಿಸಿ ಈ ಪ್ರಾಂತದಲ್ಲಿರುವ ಹಿಂದೂಗಳನ್ನು ಕ್ರೈಸ್ತರಂತೆ ಬದಲಾಯಿಸುತ್ತಿದ್ದಾರೆ. ಆದ್ದರಿಂದ ಹಿಂದೂ ಮತ ದಿನದಿನಕ್ಕು ಕ್ಷೀಣಿಸಿ ಹೋಗುತ್ತಿದೆ. ಇದನ್ನು ಗಮನಿಸಿದ ನಾವು ಒಂದು ಸಂಘವಾಗಿ ಏರ್ಪಟ್ಟು ಹಿಂದೂಮತ ರಕ್ಷಣೆಗಾಗಿ ಕೆಲಸ ಮಾಡುತ್ತಿದ್ದೇವೆ.

**ನಾನು** :– ಹಿಂದೂಮತ ರಕ್ಷಣೆಗೆ ನೀವು ಮಾಡುತ್ತಿರುವ ಕಾರ್ಯಾಚರಣೆ ಏನು?

**ರಕ್ಷಣೆ** :– ವಿದೇಶಗಳಿಂದ ಬರುವ ಕ್ರೈಸ್ತ ಗುರುಗಳನ್ನು ಇಲ್ಲಿ ಸಮಾವೇಶ ಇಡದಂತೆ ನೋಡುತ್ತಿದ್ದೇವೆ. ಎಲ್ಲಾದರು ಸಮಾವೇಶ ನಡೆಯುತ್ತಿದೆಯೆಂದು ತಿಳಿದರೆ ಅಲ್ಲಿಗೆ ಹೋಗಿ ಹೆಚ್ಚಿನ ಜನಸಂಖ್ಯೆಯಲ್ಲಿ ಆಂದೋಳನೆ ಮಾಡಿ ಅವರ ಸಮಾವೇಶಗಳು ನಡೆಯದಂತೆ ತಡೆಗಟ್ಟುತ್ತಿದ್ದೇವೆ.

**ನಾನು** :– ವಿದೇಶಗಳಿಂದ ಬರುವವರೆ ಅಲ್ಲದೆ ಇಲ್ಲಿಯೇ ಎಷ್ಟೋ ಕ್ರೈಸ್ತ ಬೋಧಕರು ಇದ್ದಾರಲ್ಲವೆ! ಅವರು ನಿತ್ಯವೂ ಎಲ್ಲೋ ಒಂದು ಕಡೆ ಬೈಬಲ್‌ನಲ್ಲಿನ ವಿಷಯಗಳನ್ನು ಬೋಧಿಸುತ್ತಿದ್ದಾರಲ್ಲ!

**ರಕ್ಷಣೆ** :– ಇಲ್ಲಿನ ಕ್ರೈಸ್ತ ಫಾದರ್‌ಗಳು, ಫಾಸ್ಟರ್‌ಗಳು ತಮ್ಮ ಬೈಬಲನ್ನು ಬೋಧಿಸಿ ಬಹಳ ಜನ ಹಿಂದೂಗಳನ್ನು ಅವರ ಮತದೊಳಗೆ ಸೇರಿಸಿಕೊಂಡಿದ್ದಾರೆ. ಹಿಂದೂಗಳು ಈ ಪ್ರಾಂತದಲ್ಲಿ ಅರ್ಧಕ್ಕಿಂತ ಮೇಲಾಗಿ ಕ್ರೈಸ್ತರಾಗಿ ಬದಲಾಗಿದ್ದಾರೆ. ಇದೆಲ್ಲವನ್ನು ಗಮನಿಸಿದ ನಾವು ಎಲ್ಲಾದರು ಕ್ರೈಸ್ತ ಬೋಧನೆಗಳು ನಡೆಯುತ್ತಿವೆಯೆಂದು ತಿಳಿಯುತ್ತಲೆ ಅಲ್ಲಿಗೆ ಹೋಗಿ ಅಲ್ಲಿ ಬೋಧಿಸುವವರನ್ನು ಹೊಡೆದು ಓಡಿಸುತ್ತಿದ್ದೇವೆ. ಅಷ್ಟೇ ಅಲ್ಲದೆ ನಂತರ ಎಲ್ಲಿಯು ಸಹ ಅವರ ಬೋಧನೆಗಳನ್ನು ಹೇಳಬಾರದೆಂದು ಹಾಗೆ ಹೇಳಿದರೆ ನಿಮ್ಮನ್ನು ಸಾಯಿಸುತ್ತೇವೆಂದು ಎಚ್ಚರಿಕೆ ಮಾಡಿ ಕಳುಹಿಸುತ್ತಿದ್ದೇವೆ.

**ನಾನು** :– ಹಾಗೆ ನೀವು ಕ್ರೈಸ್ತ ಬೋಧಕರನ್ನು ಹೊಡೆದು ಓಡಿಸಿದ ನಂತರ ಎಲ್ಲಿಯು ಅವರು ಮತ್ತೆ ಸಮಾವೇಶಗಳನ್ನು ಇಟ್ಟು ಅವರ ಬೋಧನೆಗಳನ್ನು ಹೇಳಲಿಲ್ಲವೆ?

**ರಕ್ಷಣೆ :–** ನಮಗೆ ತಿಳಿಯದಂತೆ ಕಳ್ಳತನದಿಂದ ಪ್ರಜೆಗಳನ್ನು ಸಮಾವೇಶಪಡಿಸಿ ಬೋಧಿಸುತ್ತಿರುವಂತೆ ತಿಳಿಯಿತು. ಮೊದಲು ನಡೆದಂತೆ ಎಲ್ಲಂದರಲ್ಲೆ ಮಾಡುವುದಿಲ್ಲ. ಈ ನಡುವೆ ಒಂದು ಕಡೆ ನಮಗೆ ತಿಳಿಯದಂತೆ ಒಂದು ಸಮಾವೇಶ ನಡೆಯುತ್ತದೆಂದು ತಿಳಿದು ನಾವು ಅಲ್ಲಿಗೆ ಹೋದೆವು. ನಮ್ಮನ್ನು ನೋಡುತ್ತಲೆ ಯಾರೂ ಕಾಣಿಸದಂತೆ ಹೋದರು. ಆ ಸಮಾವೇಶ ನಡೆಯಲಿಲ್ಲ. ಈ ವಿಧವಾಗಿ ನಾವು ಚೆನ್ನಾಗಿ ಶ್ರಮ ಪಡುತ್ತಿದ್ದೇವೆ.

**ನಾನು :–** ನೀವು ಮತಕ್ಕಾಗಿ ಇನ್ನೂ ಏನಾದರೂ ಮಾಡಿದ್ದೀರಾ?

**ರಕ್ಷಣೆ :–** ಎಷ್ಟೋ ಜನ ಪರಮತ ಬೋಧಕರನ್ನು ಹೊಡೆದಿದ್ದೇವೆ. ಅವರ ಪ್ರಚಾರವನ್ನು ನಿಲ್ಲಿಸಿದ್ದೇವೆ. ಅವರ ಮೇಲೆ ದಾಳಿ ಮಾಡಿ ಹೊಡೆದಿದ್ದಕ್ಕೆ ಬಹಳ ಬಾರಿ ಪೊಲೀಸ್ ಸ್ಟೇಷನ್‌ಗೆ ಹೋಗಿದ್ದೇವೆ. ಕೆಲವು ಕೇಸುಗಳಲ್ಲಿ ಸಿಕ್ಕಿಕೊಂಡಿದ್ದೇವೆ.

**ನಾನು :–** ಭೌತಿಕ ಧಾಳಿಗಳನ್ನು ಕಾನೂನು ಒಪ್ಪಿಕೊಳ್ಳುವುದಿಲ್ಲ ಅಲ್ಲವೆ! ಆಗಿರುವಾಗ ಬೇರೆ ವಿಧಾನವನ್ನು ಯೋಚಿಸಬಹುದಲ್ಲವೆ!

**ರಕ್ಷಣೆ :–** ಒಂದು ಕಡೆ ಹಿಂದೂಮತ ವೇಗವಾಗಿ ಕ್ಷೀಣಿಸಿ ಹೋಗುತ್ತಿದ್ದರೆ, ಬೇರೆ ವಿಧಾನವನ್ನು ಆಲೋಚಿಸುತ್ತಾ ಕುಳಿತರೆ ಹೇಗೆ? ಮನೆಗಳಿಗೆ ಬೆಂಕಿ ಬಿದ್ದಾಗ ಬಾವಿಯನ್ನು ತೋಡಿ ನೀರನ್ನು ತೆಗೆದು ಆರಿಸುತ್ತೇವೆಂದರೆ ಆಗುವುದಿಲ್ಲ. ನಡೆಯುವುದು ನಡೆದು ಹೋಗುತ್ತದೆ. ಆದ್ದರಿಂದ ವೇಗವಾಗಿ ಪ್ರಭಾವವನ್ನು ತೋರಿಸಿ ಮತ ಬದಲಾವಣೆಗಳು ಇಲ್ಲದಂತೆ ಹೋಗುವುದಕ್ಕೆ ದಾಳಿಗಳನ್ನು ಮಾಡುವುದೆ ಸರಿಯಾದ ಮಾರ್ಗವೆಂದು ಅಂದುಕೊಂಡಿದ್ದೇವೆ.

**ನಾನು :–** ಮಹಾತ್ಮಾಗಾಂಧಿಯವರು ಸಹ ಹಿಂಸೆ ಸರಿಯಾದ ಪದ್ಧತಿಯಲ್ಲವೆಂದು, ಅದು ಎಷ್ಟೋ ಅನರ್ಥಗಳಿಗೆ ದಾರಿ ಮಾಡಿಕೊಡುತ್ತದೆಂದು ಹೇಳಿದ್ದಾನಲ್ಲವೆ! ಹಿಂಸೆ ಅಲ್ಲದೆ ಸೌಮ್ಯವಾಗಿ ಏನನ್ನಾದರೂ ಸಾಧಿಸಬಹುದೆಂದು ಹೇಳಿದ್ದಾನೆ ತಾನೆ! ಆತನ ಮಾತು ಒಳ್ಳೆಯದಲ್ಲವೆ!

**ರಕ್ಷಣೆ :–** ನಮ್ಮ ಲೆಕ್ಕದಲ್ಲಿ ಆತನ ಮಾತು ಒಳ್ಳೆಯದಲ್ಲವೆಂದೆ ಅಲ್ಲವೆ, ಆರ್, ಯಸ್, ಯಸ್ (ರಾಷ್ಟ್ರೀಯ ಸ್ವಯಂ ಸೇವಕ್) ಕಾರ್ಯಕರ್ತನಾದ ಗಾಡ್ಸೇ ಗಾಂಧಿಯನ್ನು ಸುಟ್ಟು ಸಾಯಿಸಿದ್ದು.

**ನಾನು :–** ಹಿಂದೂ(ಇಂದೂ) ಮತ ದೇವರ ಜ್ಞಾನದಿಂದ ಹುಟ್ಟಿದೆ. ಆದ್ದರಿಂದ ಹಿಂದೂಮತ ಶಾಂತಿ ಸ್ವರೂಪವಾದದ್ದೆಂದು ಅನ್ನುತ್ತಾ ಇರುತ್ತಾರೆ. ಯಾವ ಮತವಾದರೂ ಜ್ಞಾನದಿಂದಲೆ ಹುಟ್ಟುತ್ತದಾಗಲಿ, ಹಿಂಸೆಯಿಂದ ಹುಟ್ಟುವುದಿಲ್ಲ. ಹಿಂಸೆಯಿಂದ ಹಿಂಸೆಯೆ ಎದುರಾಗುತ್ತದೆ. ಅದರಿಂದ ನಷ್ಟಹೋಗುವುದು ಮನುಷ್ಯರೆ. ಮನುಷ್ಯರಿದ್ದರೆ ಮತವಿರುತ್ತದೆ. ಮನುಷ್ಯರು ಮತಕ್ಕಾಗಿ ಒಬ್ಬರಿಗೊಬ್ಬರು ದಾಳಿಗಳು ಮಾಡಿ ಸಾಯಿಸಿಕೊಂಡರೆ ಮನುಷ್ಯರೆ ಇಲ್ಲದಂತೆ ಹೋದಾಗ ಮತ ಎನ್ನುವ ಮಾತೆ ಇಲ್ಲದಂತೆ ಹೋಗುತ್ತದಲ್ಲ! ಯಾರ ಮತವನ್ನು ಅವರು ರಕ್ಷಿಸಿಕೊಳ್ಳಬಹುದು, ಅದರಲ್ಲಿ ತಪ್ಪಿಲ್ಲ ಆದರೆ, ಮತರಕ್ಷಣೆಗೆಂದು ಹಿಂಸಾಮಾರ್ಗವನ್ನು ಅನುಸರಿಸುವುದು ಪೂರ್ತಿ ತಪ್ಪು. ಹಿಂಸಾ ಮಾರ್ಗದಿಂದ ಗತಿಸಿದ ಕಾಲದಲ್ಲಿ ಯಾರೂ ಏನೂ ಸಾಧಿಸಲಿಲ್ಲ.

**ರಕ್ಷಣೆ :–** ಬೇರೆ ಮತಸ್ಥರು ಬಂದು ಹಿಂದೂಮತದಲ್ಲಿರುವವರನ್ನು ತಮ್ಮ ಮತದೊಳಗೆ ಬದಲಾಯಿಸಿಕೊಳ್ಳುತ್ತಾ ಇದ್ದರೆ ನಾವು ಏನು ಮಾಡದೆ ಹೋದರೆ ಸ್ವಲ್ಪಕಾಲಕ್ಕೆ ಹಿಂದೂ ಮತ ಭೂಮಿ ಮೇಲೆ ಇಲ್ಲದಂತೆ ಹೋಗುತ್ತದೆ. ಆಗಿರುವಾಗ ನಾವು ಹಿಂದೂ ಮತ ರಕ್ಷಣೆಗೆ ಏನು ಮಾಡಬಾರದಾ?

**ನಾನು :–** ಪ್ರತಿ ಮತದಲ್ಲಿಯು ತಮ್ಮ ಮತವನ್ನು ಬೆಳೆಸಿಕೊಳ್ಳಬೇಕೆಂಬ ಅಭಿಲಾಷೆ ಇರುವುದು ಸಹಜವೆ. ಹಾಗೆಯೇ ತಮ್ಮ ಮತವನ್ನು ರಕ್ಷಿಸಿಕೊಳ್ಳಬೇಕೆಂಬ ಉದ್ದೆಶವು ಒಳ್ಳೆಯದೆ. ಮತರಕ್ಷಣೆಗೆ ಏನು ಮಾಡದಂತೆ ಸುಮ್ಮನಿರಬೇಕೆಂದು ನಾನು ಸಹ ಹೇಳಲ್ಲ. ಆದರೆ ಹಿಂಸಾಮಾರ್ಗವನ್ನು ಅನುಸರಿಸಬಾರದೆಂದು ಹೇಳುತ್ತಿದ್ದೇನೆ.

**ರಕ್ಷಣೆ** :– ಪ್ರಸ್ತುತ ಕಾಲದಲ್ಲಿ ಹಿಂಸೆಯಿಂದ ಆದರೇನೆ ಮತವನ್ನು ಕಾಪಾಡಿ ಕೊಳ್ಳಬಹುದು. ಬೇರೆ ಮಾರ್ಗವೆ ಇಲ್ಲ.

**ನಾನು** :– ಇತರ ಮತಸ್ಥರು ಅವರ ಮತವನ್ನು ಹೇಗೆ ಬೆಳೆಸುಕೊಳ್ಳುತ್ತಿದ್ದಾರೊ ಹೇಳಿ?

**ರಕ್ಷಣೆ** :– ಅವರ ಮತ ಗ್ರಂಥದಲ್ಲಿನ ಜ್ಞಾನ ವಿಷಯಗಳನ್ನು ಹೇಳುತ್ತಾ, ಹಿಂದೂ ಮತದಲ್ಲಿನ ಸಾಂಪ್ರದಾಯಗಳಿಗಿಂತ ತಮ್ಮ ಮತ ಸಾಂಪ್ರದಾಯಗಳೆ ದೊಡ್ಡವೆಂದು ಹೇಳುತ್ತಿರುವುದರಿಂದ ಹಿಂದೂಮತದವರು ಆ ಕಡೆ ಹೋಗುತ್ತಿದ್ದಾರೆ.

**ನಾನು** :– ನೀವೇ ಹೇಳುತ್ತಿದ್ದೀರಲ್ಲವೆ! ಅವರು ಅವರ ಗ್ರಂಥಗಳಲ್ಲಿನ ಜ್ಞಾನವನ್ನು ಹೇಳಿ, ಅದೇ ದೊಡ್ಡದೆಂದು ಹೇಳುತ್ತಿರುವಾಗ, ನೀವೂ ಸಹ ನಿಮ್ಮ ಗ್ರಂಥವಾದ ಭಗವದ್ಗೀತೆಯಲ್ಲಿನ ಜ್ಞಾನವನ್ನು ಪ್ರಜೆಗಳಿಗೆ ಹೇಳಿ ನಮ್ಮ ಜ್ಞಾನ ಎಷ್ಟೋ ದೊಡ್ಡದೆಂದು ವಿವರಿಸಿ ಹೇಳಬಹುದಲ್ಲವೆ! ನಮ್ಮ ಜ್ಞಾನ ಯಾವುದೊ ತಿಳಿಯದಿರುವಾಗ ಎದುರಿನವನು ಹೇಳುವ ಜ್ಞಾನವೇ ರುಚಿಯಾಗಿ ಕಾಣಿಸುತ್ತ ದಲ್ಲವೆ! ಸ್ವಲ್ಪವಾದರೂ ದೇವರ ಜ್ಞಾನ ತಿಳಿಯದ ಮನುಷ್ಯರು ಹಿಂದೂ ಮತದಲ್ಲಿ ಇರುವುದರಿಂದ, ಕ್ರೈಸ್ತಮತದವರು ತಮ್ಮ ಜ್ಞಾನ ಹೇಳುವುದರಿಂದ, ಎಲ್ಲಿ ಜ್ಞಾನ ತಿಳಿಯುತ್ತದೊ ಅಲ್ಲಿಗೆ ಹೋಗೋಣವೆಂಬ ಉದ್ದೇಶದಿಂದ ಕೆಲವರು ಹಿಂದೂಗಳು ಕ್ರೈಸ್ತರಾಗಿ ಬದಲಾಗಿ ಹೋಗುತ್ತಿದ್ದಾರೆ. ಅಷ್ಟೇ ಅಲ್ಲದೇ ಹಿಂದೂ ಮತದಲ್ಲಿ ಕಡಿಮೆ ಕುಲದವರನ್ನು ಕೀಳಾಗಿ ಕೆಲವರು ನೋಡುವುದರಿಂದ ಮೇಲು ಕೀಳಿಲ್ಲದ, ಎಲ್ಲರೂ ಸಮಾನವಾಗಿರುವ ಕ್ರೈಸ್ತಮತಕ್ಕೆ ಕೆಲವರು ಹಿಂದೂಗಳು ಹೋಗುತ್ತಿದ್ದಾರೆ. ಹಿಂದೂಮತದಲ್ಲಿ ಎಲ್ಲರಿಗು ದೇವಾಲಯ ಪ್ರವೇಶವಿಲ್ಲ. ದೇವಾಲಯ ಪ್ರವೇಶವಿರುವವರಾದರೂ ಕೆಲವು ಕುಲದವರು, ಜ್ಞಾನ ಗ್ರಂಥಗಳು ಓದಬಾರದು. ದೇವರಿಗೆ ಸ್ವತಃವಾಗಿ ಪೂಜೆ ಮಾಡಬಾರದು ಎನ್ನುವ ನಿಯಮಗಳಿರುವುದರಿಂದ ಕೆಲವರು ಹಿಂದೂಗಳು ಕ್ರೈಸ್ತಮತಕ್ಕೆ

ಹೋಗುತ್ತಿದ್ದಾರೆ. ಮುಖ್ಯವಾಗಿ ಹಿಂದೂಗಳಾದವರಿಗೆ ಜ್ಞಾನ ತಿಳಿಯದಂತೆ ಹೋಗಿದೆ. ಅಂತವರಿಗೆ ದೇವರ ಜ್ಞಾನ ಎಲ್ಲಿ ಸಿಕ್ಕರೆ ಅಲ್ಲಿಗೆ ಹೋಗಲು ಹಿಂಜರಿಯುವುದಿಲ್ಲ. ಕ್ರೈಸ್ತರು ಬೈಬಲ್‌ನಲ್ಲಿನ ವಾಕ್ಯಗಳನ್ನು ಹೇಳುತ್ತಿರುವುದರಿಂದ, ಜ್ಞಾನದ ಮೇಲೆ ಆಸಕ್ತಿಯಿರುವವರೆಲ್ಲರು ಕ್ರೈಸ್ತದೊಳಗೆ ಹೋಗುತ್ತಿದ್ದಾರೆ. ಕ್ರೈಸ್ತರು ಬಜಾರುಗಳನ್ನು ತಿರುಗಿ ಜ್ಞಾನ ಹೇಳುತ್ತಾ, ತಮ್ಮ ಮತದ ದೊಡ್ಡತನವನ್ನು ಕುರಿತು ಹೇಳುತ್ತಿದ್ದರೆ, ಹಿಂದೂಗಳಲ್ಲಿನ ಗುರುಗಳು ಆಶ್ರಮಗಳಿಗೆ ಪರಿಮಿತಿಯಾಗಿ ಧನಾರ್ಜನ ಚಿಂತೆಯಲ್ಲಿ ಮುಳುಗಿದ್ದಾರೆ. ಒಬ್ಬ ಸ್ವಾಮೀಜಿಯನ್ನು ತಮ್ಮ ಊರಿಗೆ ಬಂದು ಜ್ಞಾನವನ್ನು ಹೇಳೆಂದು ಒಬ್ಬ ವ್ಯಕ್ತಿ ಕೋರಿದರೆ, ತಾನು ಜ್ಞಾನವನ್ನು ಹೇಳುವುದಕ್ಕೆ ಒಂದು ದಿನಕ್ಕೆ ತನ್ನ ರೇಟು ಇಷ್ಟೆಂದು ಡ್ರಾಮಾ ನಟರು ತಮ್ಮ ರೇಟನ್ನು ಹೇಳಿದಂತೆ ಹೇಳುತ್ತಿದ್ದಾರೆ. ಅವರ ರೇಟಿಗೆ ತಕ್ಕಷ್ಟು ಹಣ ಕೊಟ್ಟು ಅವರನ್ನು ಕರೆದುಕೊಂಡು ಹೋದರೂ ಅಲ್ಲಿ ಅವರು ಹಿಂದೂಧರ್ಮಗಳನ್ನು ಹೇಳುವುದಿಲ್ಲ. ಖಚಿತವಾಗಿ ಹಿಂದೂ (ಇಂದೂ) ಧರ್ಮಗಳು ಇವು ಎಂದು ಅವರಿಗೆ ತಿಳಿಯದೆ ಹೋಗಿರುವುದರಿಂದ ಕಾಲಕ್ಷೇಪಕ್ಕೆ ಪುರಾಣಗಳನ್ನು ಹೇಳುತ್ತಿದ್ದಾರೆ. ಅವರು ಹೇಳುವ ಜ್ಞಾನ ಕಾಲಕ್ಷೇಪಕ್ಕೆ ಕೆಲಸಕ್ಕೆ ಬರುತ್ತದೆ ಹೊರತು, ಕರ್ಮಕ್ಷೇಪಕ್ಕೆ ಕೆಲಸಕ್ಕೆ ಬರುವಂತದ್ದಲ್ಲ. ಆ ವಿಧವಾಗಿ ಬರುವ ಸ್ವಾಮೀಜಿಗಳು ಒಬ್ಬೊಬ್ಬರು ಒಂದೊಂದು ದೇವರನ್ನು ಕುರಿತು ಹೇಳುವುದರಿಂದ, ಯಾವ ದೇವರನ್ನು ಆರಾಧಿಸಬೇಕೊ ಅರ್ಥವಾಗದ ಪ್ರಜೆಗಳು ಹಿಂದೂಮತವನ್ನು ಬಿಟ್ಟು ಒಂದೇ ದೇವರನ್ನು ತಿಳಿಸಿ ಹೇಳುವ ಕ್ರೈಸ್ತ ಮತದೊಳಗೆ ಹೋಗುತ್ತಿದ್ದಾರೆ. ಈ ವಿಧವಾಗಿ ಹಿಂದೂ ಮತದಲ್ಲಿ ಎಷ್ಟೋ ಲೋಪಗಳಿರುವುದರಿಂದ ಬಹಳ ಜನ ಹಿಂದೂ ಮತವನ್ನು ಬಿಟ್ಟು ಕ್ರೈಸ್ತಮತಕ್ಕೆ ಹೋಗಿದ್ದಾರೆ. ಆಂಧ್ರಪ್ರದೇಶ್‌ದಲ್ಲಿ ಗುಂಟೂರು ಜಿಲ್ಲೆಯಿಂದ ಪ್ರಾರಂಭವಾಗಿ ಉತ್ತರಾಂಧ್ರ ಎಲ್ಲವೂ ಹೆಚ್ಚಾಗಿ ಕ್ರೈಸ್ತ ಮತಕ್ಕೆ ಸೇರಿದ್ದಾರೆ. ಹಾಗೆ ನಡೆಯುವುದಕ್ಕೆ ಕಾರಣ ಹಿಂದೂಮತದಲ್ಲಿಯೇ ಇದೆ. ಯಾವ ಮಾತ್ರವೂ ಜ್ಞಾನವಿಲ್ಲದ ಮೂರ್ಖರು ಮತರಕ್ಷಣೆಯ ಹೆಸರಿನಿಂದ ಎಷ್ಟೋ ವಿಧ್ವಂಸ ಸೃಷ್ಟಿಸುತ್ತಿದ್ದರೆ, ಅವರನ್ನು ನೋಡಿದ ಎಷ್ಟೋ ಜನ ಹಿಂದೂಗಳು ಇಂತವರಿರುವ ಮತದಲ್ಲಿ ಇರಬಾರದೆಂದು ಹಿಂದೂ ಮತವನ್ನು

ಅಸಹ್ಯಿಸಿಕೊಂಡು ಬೇರೆ ಮತದೊಳಗೆ ಹೋಗುವುದು ನಡೆದಿದೆ. ನಮ್ಮ ಭಕ್ತನ ಮೇಲೆ ಒಂದೇಬಾರಿಗೆ 25 ಜನ ಬಂದು, ಹಿಂದೂಮತ ಮುಸುಗಿನಲ್ಲಿದ್ದು ಪರಮತವನ್ನು ಬೋಧಿಸುತ್ತಿದ್ದಾರೆಂದು ದಾಳಿ ಮಾಡಿದಾಗ, ಹಿಂದೂಮತದಲ್ಲಿ ಜ್ಞಾನವನ್ನು ಬೋಧಿಸುವ ನಮ್ಮನ್ನು ಹಿಂದೂಮತ ಮುಸುಗಿನಲ್ಲಿರುವವರೆಂದು ಅನ್ನುವುದರಿಂದ, ಈ ಮುಸುಗು ನಮಗೇಕೆ? ಮುಸುಗೆ ಇಲ್ಲದೆ ಬೇರೆ ಮತಕ್ಕೆ ಹೋಗಿರಬಹುದಲ್ಲವೆ! ಎನ್ನುವ ಆಲೋಚನೆ ಬಂದಿತು. ನಂತರ ಯಾರೋ ಅಜ್ಞಾನಿಗಳು ಮಾಡಿದ ಕೆಲಸಕ್ಕೆ ನಾವು ಮತವನ್ನು ಬದಲಾಯಿಸುವುದೇಕೆ ಎಂದು ಅಂದುಕೊಂಡೆವು. ಹಿಂದೂ(ಇಂದೂ) ಮತದಲ್ಲಿನ ನಾಲ್ವರು ಸಿದ್ಧಾಂತಕರ್ತರಲ್ಲಿ ಒಬ್ಬನಾಗಿರುವ ನನಗೇ ಅಂತಹ ಆಲೋಚನೆ ಬಂದಿದೆ ಯೆಂದರೆ ಹಿಂದೂಮತದಲ್ಲಿ ಕೆಲವರ ಪ್ರವರ್ತನೆ ಹೇಗಿದೆಯೊ ನೀವೆ ನೋಡಿರಿ. ಇಂತಹ ಅನೇಕ ಕಾರಣಗಳಿಂದ ಹಿಂದೂ ಮತ ಸ್ವಲ್ಪ ಪತನವಾಗಿದೆಯೆಂದು ಹೇಳದೆ ತಪ್ಪುವುದಿಲ್ಲ.

ಹಿಂದೂಮತವನ್ನು ರಕ್ಷಿಸುವ ಯೋಗ್ಯತೆ ಗುರುಗಳಿಗು, ಸಿದ್ಧಾಂತ ಕರ್ತರಿಗು ಇರುತ್ತದೆ. ಹಿಂದೂಮತದಲ್ಲಿನ ಗುರುಗಳು ಯಾರ ಆಶ್ರಮಕ್ಕೆ ಅವರು ಸೀಮಿತವಾಗಿ ಹೋಗಿದ್ದಾರೆ. ಸಿದ್ಧಾಂತಕರ್ತರಾದ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು ಯಾವಾಗಲೊ ಗತಿಸಿ ಹೋಗಿದ್ದಾರೆ. ಅವರ ಪರಂಪರೆಯನ್ನು ಮುಂದುವರೆಸುವವರು ಇದ್ದರೂ, ಅವರು ಮತವನ್ನು ಕುರಿತು ತಲೆ ಕೆಡಿಸಿಕೊಳ್ಳುತ್ತಿಲ್ಲ. ಪ್ರಸ್ತುತ ಕಾಲದಲ್ಲಿರುವ ಒಬ್ಬನೇ ಒಬ್ಬ ಸಿದ್ಧಾಂತಕರ್ತ ನಾನು ಮಾತ್ರವೇ. ನನ್ನ ಸಿದ್ಧಾಂತ ತ್ರೈತಸಿದ್ಧಾಂತವಾಗಿರುವುದರಿಂದ ನನ್ನ ಸಿದ್ಧಾಂತವನ್ನಾಗಲಿ ಅದರಲ್ಲಿನ ಜ್ಞಾನವಾಗಲಿ ತಿಳಿಯದವರು, ನನ್ನನ್ನು ಸಹ ಪರಮತ ಬೋಧಕನೆಂದು ಪ್ರಚಾರಮಾಡಿ, ತಾವು ನಿಜವಾದ ಮತರಕ್ಷಕರಂತೆ ಪ್ರಚಾರವಾಗಬೇಕೆಂದು ಕೊಂಡರು. ಆದರೂ ಹಿಂದೂಧರ್ಮಗಳನ್ನು ತಿಳಿಯದವರು, ಹಿಂದೂ ಮತವನ್ನು ರಕ್ಷಿಸಲಾರರೆಂದು ಅವರಿಗೆ ತಿಳಿದಿಲ್ಲ. ಇಂತಹ ಜ್ಞಾನವಿಲ್ಲದ ಮತರಕ್ಷಕರು ಬಂದ ನಂತರವೆ ಹಿಂದೂಮತ ವೇಗವಾಗಿ ಕ್ಷೀಣಿಸಿ ಕ್ರೈಸ್ತ

ಮತ ಬೆಳೆದು ಹೋಗಿದೆ. ಇತರ ಮತಗಳ ಮೇಲೆ ದಾಳಿಗಳು ಮಾಡುತ್ತಿದ್ದರೂ ಹಿಂದೂಗಳು ಪರಮತದವರಾಗಿ ಬದಲಾಗುತ್ತಿದ್ದಾರೆ. ಇದೆಲ್ಲವೂ ಗಮನಿಸಿದ ನಾವು ಈಗಿನಿಂದ ಮತಬದಲಾವಣೆಗಳು ನಡೆಯದಂತೆ ಮಾಡಬೇಕೆಂದು ಕೊಂಡಿದ್ದೇವೆ. ಹಾಗೆ ಮಾಡುವುದಕ್ಕೆ ಒಂದೇ ಒಂದು ಆಯುಧ ಪ್ರಜೆಗಳಿಗೆ ದೈವಜ್ಞಾನವನ್ನು, ಧರ್ಮಗಳನ್ನು ತಿಳಿಸುವುದೇ. ನಾನು ಹಾಗೆ ಅಂದುಕೊಂಡಾಗಿ ನಿಂದ ದೈವಜ್ಞಾನವನ್ನು, ಧರ್ಮಗಳನ್ನು ಗ್ರಂಥರೂಪದಲ್ಲಿ ತಿಳಿಸಿದ್ದೇನೆ. ನನ್ನ ಬೋಧನೆಗಳನ್ನು ನೋಡಿದ ಎಲ್ಲ ಮತದವರು ನನ್ನ ಹತ್ತಿರಕ್ಕೆ ಬರುವುದು ನಡೆದಿದೆ. ನನ್ನ ಬಳಿಗೆ ಬಂದ ಎಲ್ಲ ಮತದವರು ಏಕ ಮತವಾಗಿ ಬೆರೆತಿದ್ದು ಜ್ಞಾನವನ್ನು ತಿಳಿದುಕೊಳ್ಳುತ್ತಾ, ಈ ಜನ್ಮದಲ್ಲಿ ಇಲ್ಲಿಯವರೆಗು ತಿಳಿಯದ ಜ್ಞಾನ ತಿಳಿದಿದೆಯೆಂದು ಸಂತೋಷಿಸುತ್ತಿದ್ದಾರೆ. ಇಲ್ಲಿಯವರೆಗು ನಮ್ಮ ಮತದಲ್ಲಿ ಅರ್ಥವಾಗದ ಜ್ಞಾನ ಈಗ ಅರ್ಥವಾಗಿದೆಯೆಂದು ಇತರ ಮತದವರೆನ್ನುತ್ತಿದ್ದಾರೆ. ಹಿಂದೂಮತವನ್ನು ಬಿಟ್ಟುಹೋದವರು ಹಿಂದೂಮತದಲ್ಲಿ ಇಷ್ಟು ದೊಡ್ಡ ಜ್ಞಾನವಿದೆಯೆಂದು ತಿಳಿಯದೆ ನಾವು ಹಿಂದೂಮತವನ್ನು ಬಿಟ್ಟು ಬೇರೆ ಮತಕ್ಕೆ ಬಂದಿದ್ದೇವೆಂದು ಹೇಳುತ್ತಿದ್ದಾರೆ. ಒಟ್ಟಿನಲ್ಲಿ ನಮ್ಮ ಜ್ಞಾನವನ್ನು ನೋಡಿದವರೆಲ್ಲರು ಸಂತೋಷಿಸುತ್ತಿದ್ದಾರೆ. ಅಂತವರನ್ನು ನೋಡಿ ನೀವು ಯಾವ ಮತದಲ್ಲಿದ್ದೀರೋ ಆ ಮತದಲ್ಲಿಯೇ ಇದ್ದು ದೇವರ ಜ್ಞಾನವನ್ನು ತಿಳಿದುಕೊಳ್ಳಿ, ಮತಗಳನ್ನು ಮರೆತುಬಿಡಿ ಎಂದು ಹೇಳಿದ್ದೇವೆ.

ನಮ್ಮ ಬೋಧನೆಗಳನ್ನು ಕೇಳಿದ ಒಬ್ಬೊಬ್ಬರು ನನ್ನ ಕಡೆ ಬರುವುದಕ್ಕೆ ಆರಂಭಿಸಿದ್ದಾರೆ. ಆ ವಿಧವಾಗಿ ಮೂರು ಮತದವರು ಅವರವರ ಗ್ರಂಥಗಳಲ್ಲಿನ ಜ್ಞಾನವನ್ನು ವಿಪುಲವಾಗಿ ನಮ್ಮ ಮುಖಾಂತರ ತಿಳಿದುಕೊಳ್ಳುತ್ತಿದ್ದಾರೆ. ನನಗೆ ಎಲ್ಲ ಮತಗಳ ಜ್ಞಾನ ಸುಲಭವಾಗಿ ತಿಳಿದಿದೆ. ಏಕೆಂದರೆ! ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಇಂದೂ ಧರ್ಮಗಳು ನನಗೆ ತಿಳಿದಿರುವುದರಿಂದ, ಎಲ್ಲ ಮತಗಳಲ್ಲಿನ ಧರ್ಮಗಳ ಜ್ಞಾನ ನನಗೆ ತಿಳಿದಿದೆ. ಆಗಿರುವಾಗ ನಾನು ಹೇಳುವ ಇಂದೂಧರ್ಮಗಳು ಎಲ್ಲಾ ಮತದವರ ಗ್ರಂಥಗಳಲ್ಲಿ ಇರುವುದರಿಂದ, ಅವು

ಅವರಿಗೆ ಸುಲಭವಾಗಿ ಅರ್ಥವಾಗಿವೆ. ಆದ್ದರಿಂದ ನಾನು ಹೇಳುವ ಪ್ರತಿ ಮಾತು, ಪ್ರತಿ ಜ್ಞಾನ ಎಲ್ಲ ಮತಗಳಿಗು ಅನ್ವಯಿಸುತ್ತದೆ. ನನ್ನ ಜ್ಞಾನ ಮಾಯೆಗೆ ಅತೀತವಾದದ್ದು, ಮತಕ್ಕೆ ಅತೀತವಾದದ್ದು. ಆದ್ದರಿಂದ ಜ್ಞಾನದ ಮೇಲೆ ಆಸಕ್ತಿ ಇರುವವರಿಗೆಲ್ಲರಿಗು ಸುಲಭವಾಗಿ ಅರ್ಥವಾಗುತ್ತಿದೆ ಮತ್ತು ಅದು ತಮ್ಮ ಮತದಲ್ಲಿನ ಜ್ಞಾನವಾಗಿಯೆ ತಿಳಿಯುತ್ತದೆ. ಆ ವಿಧವಾಗಿ ಇರುವುದರಿಂದ ಯಾವನೂ ಅಜ್ಞಾನಿಯಾಗಿ ಇರುವುದಕ್ಕೆ ಅವಕಾಶವಿಲ್ಲ. ಹಾಗೆ ಯಾರೂ ಮತ ಬದಲಾಗುವುದಕ್ಕೆ ಪ್ರಯತ್ನಿಸುವುದಿಲ್ಲ. ನನ್ನ ಜ್ಞಾನದಿಂದ ಮನುಷ್ಯರಲ್ಲಿನ ಮತ ದ್ವೇಷಗಳು ಯಾವ ಮಾತ್ರವೂ ಇಲ್ಲದಂತೆ ಹೋಗಿವೆ. ಮಾನವ ಜಾತಿಗೆ ಅಪಾಯಕರವಾದ ಮತದ್ವೇಷಗಳು ಈಗಿನಿಂದ ಮಾಯವಾಗಿ ಹೋಗುವುದಕ್ಕೆ ಅವಕಾಶವಿದೆ. ನನ್ನ ಜ್ಞಾನ ಭೂಮಿಯಮೇಲೆ ಪ್ರಜೆಗಳೆಲ್ಲರಿಗೂ ತಿಳಿಯುತ್ತಿದ್ದಂತೆ ಅಜ್ಞಾನ ಮಾಯವಾಗಿ ಹೋಗಬಲ್ಲದು. ಸ್ವಲ್ಪಕಾಲಕ್ಕೆ ಮತದ್ವೇಷಗಳು ಇಲ್ಲದ ಮಾನವರನ್ನು ಪೂರ್ತಿಯಾಗಿ ನೋಡಬಲ್ಲೆವು.

**ರಕ್ಷಣೆ** :– ನಾವು ಸಹ ಹಿಂಸೆಯನ್ನು ಬಿಟ್ಟು ನಿಮ್ಮ ಹಾಗೆ ಜ್ಞಾನವನ್ನು ತಿಳಿದು ಹಿಂದೂ ಮತವನ್ನು ರಕ್ಷಿಸುವುದಕ್ಕೆ ಪ್ರಯತ್ನಿಸುತ್ತೇವೆ.

**ನಾನು** :– ನೀವು ಈ ಮಾತನ್ನು ಹೇಳುವುದು ಒಳ್ಳೆಯದೆ ಆದರೆ, ನೀವು ಜ್ಞಾನವನ್ನು ಮಾತ್ರ ತಿಳಿದುಕೊಳ್ಳಿ, ಮತವನ್ನು ರಕ್ಷಿಸುವ ಕೆಲಸವನ್ನು ಬಿಡಿ. ಮತವನ್ನು ರಕ್ಷಿಸುವ ಕೆಲಸಕ್ಕೆ ನೀವು ದೂರವಾಗಿದ್ದರೆ ಆ ಕೆಲಸವನ್ನು ಗುರುಗಳು, ಪೀಠಾಧಿಪತಿಗಳು, ಸ್ವಾಮೀಜೀಗಳು ಮಾಡುತ್ತಾರೆ. ನೀವಿರುವುದರಿಂದ ನಿಮಗೆ ಭಯಪಟ್ಟು ಅವರು ಹೊರಗೆ ಬರುವುದಿಲ್ಲ. ನೀವು ಮತರಕ್ಷಣೆಗೆ ದೂರವಾಗಿದ್ದರೆ ಗುರುಗಳು, ಸ್ವಾಮಿಗಳು ಎಲ್ಲರೂ ಹೊರಗೆ ಬಂದು ಆ ಕೆಲಸವನ್ನು ಅವರಿಗೆ ಕೈಲಾದಷ್ಟು ಮಾಡುತ್ತಾರೆ. ನೀವು ಮೊದಲು ದೈವಜ್ಞಾನವನ್ನು ತಿಳಿದುಕೊಳ್ಳಿ.

**ರಕ್ಷಣೆ** :– ನಾವು ಇಷ್ಟು ದಿನಗಳು ಮತ ರಕ್ಷಕರಾಗಿದ್ದು, ಈಗ ಆ ರಂಗದಿಂದ ದೂರವಾಗುವುದು ನಮಗೆ ಇಷ್ಟವಿಲ್ಲ. ನಮಗೆ ಕೈಲಾದಷ್ಟು ನಾವು ಮಾಡುತ್ತೇವೆ.

**ನಾನು :–** ಸ್ವಾಮಿಗಳು, ಗುರುಗಳು, ಪೀಠಾಧಿಪತಿಗಳು ಸಮಾಜದಲ್ಲಿ ಎಷ್ಟೋ ಸೌಮ್ಯವಾಗಿದ್ದೂ, ಯಾರಿಗೂ ಯಾವ ಹಾನಿ ಮಾಡದಂತೆ ಮಳೆಹಾವುಗಳಂತೆ ಇರುತ್ತಾರೆ. ಅವರಿಂದ ಯಾರಿಗು ಯಾವ ಕಷ್ಟ ಇರುವುದಿಲ್ಲ. ಆ ವಿಧವಾಗಿ ಇದ್ದೂ ಅವರು ಸ್ವಲ್ಪಮಟ್ಟಿಗೆ ಮತವನ್ನು ಉದ್ಧರಿಸುವರು. ನೀವು ಹಾಗಲ್ಲದೆ ಇಲ್ಲಿಯವರೆಗೂ ನಡೆದುಕೊಂಡಿರುವುದನ್ನು ಅನುಸರಿಸಿ ದಾಳಿಗಳು ಮಾಡುವ ಸ್ವಭಾವವಿರುವ ನೀವು ತೀವ್ರವಾದ ವಿಷವಿರುವ ನಾಗರಹಾವಿನಂಥವರು. ಈಗ ನಾನು ಹೇಳಿರುವುದನ್ನು ಕೇಳಿ ನೀವು ಬದಲಾದರು, ಹಾವು ಕಚ್ಚುವುದನ್ನು ಬಿಟ್ಟರೂ ಬುಸುಗುಟ್ಟುವುದು ಬಿಡುವುದಿಲ್ಲ ಎನ್ನುವಂತೆ ನೀವು ಕೈಗಳಿಂದ ಹೊಡೆಯುವುದು ಬಿಟ್ಟರೂ, ಬಾಯಿಂದ ಬೈಯ್ಯುವುದು ಮಾತ್ರ ಬಿಡುವುದಿಲ್ಲ. ಧರ್ಮವನ್ನು ಬೋಧಿಸುವವರು ಮಳೆಹಾವಿನಂತೆ ತಾಳ್ಮೆಯಿಂದ ಕೆಲಸ ಮಾಡಬೇಕು. ಅದು ಸ್ವಾಮಿಗಳಿಗಾದರೇನೆ ಸರಿಹೋಗುತ್ತದೆ. ಆದ್ದರಿಂದ ನೀವು ಮತ ರಕ್ಷಣೆಯನ್ನು ಬಿಟ್ಟು, ಜ್ಞಾನ ಶೇಖರಣೆ, ಧರ್ಮ ಆಚರಣೆಯನ್ನು ಇಟ್ಟುಕೊಳ್ಳುವುದು ಒಳ್ಳೆಯದು.

ಇಲ್ಲಿಯವರೆಗು ಇಂದೂ ಧರ್ಮವನ್ನು ಕುರಿತು, ಹಿಂದೂ ಮತವನ್ನು ಕುರಿತು, ಮತಗಳಲ್ಲಿ ಮನುಷ್ಯರ ವಿಧಾನವನ್ನು ಕುರಿತು ತಿಳಿದುಕೊಂಡಿದ್ದೇವೆ. ಈಗ ಇಂದೂ ಧರ್ಮವನ್ನು ಆದಿಯಿಂದ ತಿಳಿದುಕೊಳ್ಳೋಣ. ದೇವರ ಜ್ಞಾನವನ್ನು ಚಂದ್ರತೇಜಸ್ಸು ಎಂದು ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ 24ನೇ ಶ್ಲೋಕದಲ್ಲಿ ಹೇಳಲಾಗಿದೆ. ದೇವರ ಜ್ಞಾನ ಧರ್ಮವನ್ನು ತಿಳಿಸುವುದರಿಂದ ಅದನ್ನು ಇಂದೂಧರ್ಮ ಎಂದಿದ್ದೇವೆ. ಸೃಷ್ಠಿ ಆದಿಯಲ್ಲಿ ದೇವರೆ ಯಾವುದೊ ಒಂದು ವಿಧವಾಗಿ ತನ್ನ ಧರ್ಮಗಳನ್ನು ಸೂರ್ಯನಿಗೆ ತಿಳಿಸಿದ್ದಾನೆ. ಸೂರ್ಯನಿಂದ ಕೆಳಗೆ ಬಂದ ಇಂದೂ ಧರ್ಮ ಶಾಶ್ವತವಾಗಿ ಭೂಮಿ ಮೇಲೆಯೆ ನಿಂತುಹೋಗಿದೆ. ಕಾಲಗಮನದಲ್ಲಿ ಆಗಾಗ ಇಂದೂ ಧರ್ಮಗಳಿಗೆ ಭೂಮಿ ಮೇಲೆ ಅಡಚಣೆಗಳು ಏರ್ಪಟ್ಟರೂ ಅವುಗಳನ್ನು ಮತ್ತೆ ದೇವರೇ ಸರಿಮಾಡುವನು. ಪ್ರಸ್ತುತ ಕಾಲದಲ್ಲಿ ಇಂದೂ ಧರ್ಮಗಳಿಗೆ ಹೆಸರು ಬದಲಾಗಿ ಹಿಂದೂ

ಧರ್ಮಗಳೆಂದು ಕರೆಯಲ್ಪಡುತ್ತಿವೆ. ಧರ್ಮಗಳಿಗೆ ಗ್ಲಾನಿ (ಹಾನಿ) ಏರ್ಪಟ್ಟರೆ ದೇವರು ಅವತರಿಸಿ ಮತ್ತೆ ತನ್ನ ಧರ್ಮಗಳನ್ನು ತಿಳಿಸುವನು. ಈಗ ಧರ್ಮಗಳ ಹೆಸರು ಮಾತ್ರ ಬದಲಾಗಿರುವುದರಿಂದ ಹೆಸರನ್ನು ಮೊದಲು ಕೇಳಿರುವುದರ ಪ್ರಕಾರ ನಾವೇ ಮತ್ತೆ ಸರಿಯಾಗಿ ಹೇಳಿಕೊಳ್ಳಬಹುದು. ಆದ್ದರಿಂದ ಬದಲಾದ ಧರ್ಮದವೊಂದು ಹೆಸರನ್ನು ಕುರಿತು, ಬದಲಾಗದ ಮೊದಲಿದ್ದ ಹೆಸರನ್ನು ಕುರಿತು ವಿವರಿಸಿಕೊಳ್ಳೋಣ.

ದ್ವಾಪರಯುಗದ ಕೊನೆಯಲ್ಲಿ ಧರ್ಮಗಳಿಗೆ ಹಾನಿ ಏರ್ಪಟ್ಟು ಅಧರ್ಮಗಳು ಬೆಳೆದು ಹೋದಾಗ ದೇವರು ಭಗವಂತನಾಗಿ ಭೂಮಿ ಮೇಲೆ ಬಂದು ಆದಿಯಲ್ಲಿ ಸೂರ್ಯನಿಗೆ ಹೇಳಿದ ಧರ್ಮಗಳನ್ನೇ ಮತ್ತೆ ಹೇಳಿ ಹೋಗಬೇಕಾಗಿದೆ. ಒಂದು ಬಾರಿ ಪಾತ್ರೆಯಲ್ಲಿ ಮೀನಿನ ಸಾರು ಮಾಡಿದರೆ ಮೀನಿನ ವಾಸನೆ ಆ ಪಾತ್ರೆಯನ್ನು ಒಂದು ಬಾರಿ ತೊಳೆದರೆ ಹೋಗುವುದಿಲ್ಲ. ಆದರೆ ಪೂರ್ತಿವಾಸನೆ ಹೋಗಬೇಕೆಂದರೆ ಮೂರು ಬಾರಿ ಪಾತ್ರೆಯನ್ನು ಶುಭ್ರಮಾಡಬೇಕಾಗಿರುತ್ತದೆ. ಒಂದು ಬಾರಿ ಉಸುಗು, ಎರಡನೆ ಬಾರಿ ಉಪ್ಪು, ಮೂರನೆಬಾರಿ ರಾಗಿಹಿಟ್ಟು ಹಾಕಿ ತಿಕ್ಕಿದರೆ ಪಾತ್ರೆಗಿರುವ ಮೀನಿನ ವಾಸನೆ ಪೂರ್ತಿಯಾಗಿ ಹೋಗುವುದು. ಅದೇ ವಿಧವಾಗಿ ಒಂದು ಬಾರಿ ಅಧರ್ಮಗಳು ಮನುಷ್ಯರಲ್ಲಿ ಹರಡಿಕೊಂಡರೆ ಮನುಷ್ಯರಲ್ಲಿ ಅವುಗಳ ವಾಸನೆ ಪೂರ್ತಿಯಾಗಿ ಇಲ್ಲದಂತೆ ಹೋಗುವುದಕ್ಕೆ, ದೇವರು ಮನುಷ್ಯರ ನಡುವೆ ಮೂರುಬಾರಿ ಅವತರಿಸಿ ಧರ್ಮಗಳನ್ನು ಹೇಳಬೇಕಾಗಿದೆ. ಮೂರು ಬಾರಿ ಪಾತ್ರೆಯನ್ನು ತೊಳೆಯುವುದಕ್ಕೆ ಸ್ವಲ್ಪ ಸಮಯ ಬೇಕಾಗುತ್ತದೆ. ಹಾಗೇ ಮೂರು ಬಾರಿ ಭಗವಂತನು ಅವತರಿಸಿ ತನ್ನ ಧರ್ಮಗಳನ್ನು ತಿಳಿಸುವುದಕ್ಕೂ ಸಹ ಸ್ವಲ್ಪ ಕಾಲ ಬೇಕಾಗುತ್ತದೆ. ದ್ವಾಪರಯುಗದ ಕೊನೆಯಲ್ಲಿ ಧರ್ಮಗಳಿಗೆ ಮುಪ್ಪು ಏರ್ಪಟ್ಟು ಪೂರ್ತಿಯಾಗಿ ಅಧರ್ಮಗಳು ಮನುಷ್ಯರಲ್ಲಿ ವ್ಯಾಪಿಸಿದಾಗ, ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ ಭಗವಂತನ ರೂಪದಲ್ಲಿರುವ ಕೃಷ್ಣನು ಧರ್ಮ ಸಂಸ್ಥಾಪನೆ ಕಾರ್ಯ ಪ್ರಾರಂಭಿಸಿದನು, ಅಧರ್ಮಗಳು ಪೂರ್ತಿ

ಇಲ್ಲದಂತಾಗಿ ತಿರುಗಿ ಧರ್ಮಗಳು ನೆಲೆಗೊಳಿಸುವುದು ಇಲ್ಲಿಯವರೆಗು ಪೂರ್ತಿಯಾಗಿಲ್ಲ. ಧರ್ಮಸಂಸ್ಥಾಪನೆ ಕಾರ್ಯ ಮೂರು ಬಾರಿ ನಡೆಯಬೇಕು. ಇಲ್ಲಿಗೆ ಎರಡು ಬಾರಿ ನಡೆದಿದೆ. ಮೂರನೆ ಬಾರಿ ನಡೆಯಬೇಕಾಗಿದೆ. ಅಧರ್ಮ ನಿರ್ಮೂಲನೆ ಕಾರ್ಯ ಪ್ರಾರಂಭಿಸಿ ಇಲ್ಲಿಗೆ ದ್ವಾಪರಯುಗದ ಕೊನೆಯಿಂದ ಸುಮಾರು 5160 ವರ್ಷಗಳು ಕಳೆದು ಹೋಗಿವೆ. ಆದರೆ ಭಗವಂತನು ಯಾವಾಗ ಬಂದು ಧರ್ಮಸಂಸ್ಥಾಪನೆಯನ್ನು ಯಾವಾಗ ಪೂರ್ತಿ ಮಾಡುತ್ತಾನೊ ಯಾರಿಗೂ ತಿಳಿದಿಲ್ಲ. ಮೀನಿನ ವಾಸನೆಯ ಪಾತ್ರೆಯನ್ನು ಮೂರು ಬಾರಿ ಶುಭ್ರಮಾಡುವುದಕ್ಕೆ 30 ನಿಮಿಷಗಳ ಕಾಲ ಬೇಕಾಗುತ್ತದೆಂದು ಹೇಳಬಹುದು. ಆದರೆ ಅಧರ್ಮಗಳ ವಾಸನೆಯನ್ನು ಇಲ್ಲದಂತೆ ಮಾಡುವುದಕ್ಕೆ ಪಾತ್ರೆಯನ್ನು ಉಜ್ಜಿದಂತೆ ಮನುಷ್ಯರಿಗೆ ಹೇಳುವುದಕ್ಕೆ ಇಷ್ಟುಕಾಲ ಬೇಕಾಗುತ್ತದೆಂದು ಹೇಳಲಾರೆವು. ಮೊದಲು ದೇವರು ಹೇಳಿರುವುದು ನಂತರ ಹೇಳಬೇಕಾಗಿರುವುದು ತನ್ನ ಧರ್ಮಗಳನ್ನೇ. ಆದರೆ ಆತನ ಧರ್ಮಗಳನ್ನು ದೇವರ ಧರ್ಮಗಳೆಂದು ಉಚ್ಚರಿಸಬಾರದು. ಆದ್ದರಿಂದ ದೇವರ ಧರ್ಮಗಳಿಗೆ ಪ್ರತ್ಯೇಕಿಸಿ ಒಂದು ಹೆಸರನ್ನು ದೇವರೆ ನಿರ್ಣಯಿಸಿದ್ದಾನೆ. ಆ ಹೆಸರೆ ಇಂದೂಧರ್ಮ.

ದೇವರು ನಿರ್ಣಯಿಸಿದ **'ಇಂದೂಧರ್ಮ'** ಎಂಬ ಹೆಸರು ಈಗ ಸ್ವಲ್ಪ ಬದಲಾವಣೆ ಹೊಂದಿ **'ಹಿಂದೂಧರ್ಮ'** ಎಂದು ಕರೆಯಲ್ಪಡುತ್ತಿದೆ. ಹಿಂದೂ ಎನ್ನುವ ಪದವನ್ನು ಮನುಷ್ಯರು ಸೃಷ್ಠಿಸಿರುವುದೆಯಾಗಲಿ ದೇವರು ಹೇಳಿರುವು ದಲ್ಲ. ದೇವರು ತನ್ನ ಧರ್ಮಕ್ಕೆ ಹೆಸರನ್ನು ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ 25ನೇ ಶ್ಲೋಕದಲ್ಲಿ ಹೇಳಿದಂತೆ ಆಧಾರವಿದೆ. ದೇವರು ಎಷ್ಟೋ ಅರ್ಥದಿಂದ ಕೂಡಿಕೊಂಡ 'ಇಂದೂ' ಎಂಬ ಶಬ್ಧವನ್ನು ತೆಲುಗು ಲಿಪಿಯಲ್ಲಿ ಮೂರನೆ ಸ್ವರ ಆದ 'ಇ' ಎನ್ನುವ ಅಕ್ಷರದಿಂದ ಪ್ರಾರಂಭಿಸಿದ್ದಾನೆ. ಮನುಷ್ಯರು ಅದರ ಬೆಲೆ ತಿಳಿಯದವರಾಗಿ ಇಂದೂ ಶಬ್ಧವನ್ನು ವ್ಯಂಜನ 'ಹಿ' ಯಿಂದ ಪ್ರಾರಂಭವಾಗುವ ಹಿಂದೂ ಶಬ್ಧವಾಗಿ ಬದಲಾಯಿಸಿಕೊಂಡಿದ್ದಾರೆ. ಪೂರ್ವ ಚರಿತ್ರೆಯನ್ನು ತಿಳಿದ ನಾನು ದೇವರು ಹೇಳಿದ ಇಂದೂ ಪದವನ್ನೇ

ಅವಶ್ಯ ಬಂದಾಗಲೆಲ್ಲಾ ಬರೆಯುತ್ತಾ ಬಂದಿದ್ದೇನೆ. ದೇವರ ಧರ್ಮ ಎಂದು ಹೇಳಬೇಕಾದ ಸಂದರ್ಭದಲ್ಲೆಲ್ಲಾ ಇಂದೂಧರ್ಮವೆಂದೇ ನಾವು ಬರೆಯುವುದು ನಡೆದಿದೆ. ಇಲ್ಲಿಗೆ ಐವತ್ತು (50) ಆಧ್ಯಾತ್ಮಿಕ ಗ್ರಂಥಗಳನ್ನು ನಾವು ಬರೆದಿದ್ದೇವೆ. ಅವುಗಳಲ್ಲಿನ ಜ್ಞಾನ ಪ್ರಜೆಗಳಿಗೆ ತಿಳಿಯುವುದಕ್ಕೆ ನಾಲ್ಕು ವಾಹನಗಳನ್ನು, 40 ಜನ ಮನುಷ್ಯರನ್ನಿಟ್ಟು ಪ್ರತಿ ಊರು ತಿರುಗಿ ಪ್ರಚಾರ ಮಾಡುವಂತೆ ಮಾಡಿದ್ದೇವೆ. ನಮ್ಮ ಪ್ರಚಾರ ವಾಹನಗಳ ಮೇಲೆ **'ಇಂದೂಧರ್ಮ ಪ್ರಚಾರ'** ಎಂದು ಬರೆದಿದ್ದೇವೆ. ನಮ್ಮ ಪ್ರಚಾರ ವಾಹನಗಳು ಯಾವ ಊರಿಗೆ ಹೋದರೂ ವಾಹನದ ಮೇಲೆ ಮುಂದುಗಡೆ ದೊಡ್ಡ ಅಕ್ಷರಗಳಿಂದ ಕಾಣಿಸುವ ಇಂದೂಧರ್ಮ ಎಂದು ಕಾಣಿಸುತ್ತಲೆ, ಗಾಡಿ ಹತ್ತಿರಕ್ಕೆ ಬಂದು ನೀವು ತಪ್ಪು ಬರೆದಿದ್ದೀರ, ಹಿಂದೂ ಎಂದು ಬರೆಯದೆ ಇಂದೂ ಎಂದು ಬರೆಯುವುದು ತಪ್ಪಲ್ಲವೆ! ಧರ್ಮ ಪ್ರಚಾರ ಮಾಡುವವರಿಗೆ ಇಂದೂ ಎಂದು ಬರೆಯುವುದು ತಪ್ಪೆಂದು ತಿಳಿದಿಲ್ಲವೇ ಎಂದು ಕೋಪಿಸಿಕೊಂಡು ಹೇಳುತ್ತಿದ್ದರು, ಸಾಧಾರಣವಾಗಿ ಹೇಳುತ್ತಿದ್ದರು, ಜೋರಾಗಿ ಕೂಗಿ ಹೇಳುವವರು ಬಹಳ ಜನ ಪ್ರತಿಯೊಂದು ಕಡೆ ಹೇಳುವುದು ನಡೆಯುತ್ತಿದೆ. ಒಂದುವೇಳೆ ಇಂದೂ ಶಬ್ದದವೊಂದು ಅಸಲು ಚರಿತ್ರೆಯನ್ನು ಅವರಿಗೆ ಹೇಳಬೇಕೆಂದುಕೊಂಡರೂ, ಅವರು ಕೇಳುವ ಸ್ಥಿತಿಯಲ್ಲಿರದೆ ಹೇಳುವ ಸ್ಥಿತಿಯಲ್ಲಿರುತ್ತಾರೆ.

ಇಂದೂ ಎಂಬ ಪದವನ್ನು ಕುರಿತು ದಂಡಿಸಿ ಕೇಳುವವರಲ್ಲಿ ಬ್ರಾಹ್ಮಣನು, ಬಾಪನು ಇಬ್ಬರೂ ಇರುವಾಗ, ಇನ್ನೂ ಅಜ್ಞಾನಿಗಳು, ವಿಜ್ಞಾನಿಗಳು, ಸಾಧಕರು, ಬೋಧಕರು, ಧರ್ಮರಕ್ಷಕರು, ಮತರಕ್ಷಕರು ಎಷ್ಟೋ ಜನ ಇದ್ದಾರೆ. ಅಂತವರಲ್ಲಿ ಹಿಂದೂಮತ ರಕ್ಷಕನಾದ ಒಬ್ಬರು ನಮ್ಮನ್ನು ನಿಲ್ಲಿಸಿ ನೀವು ಏಕೆ ಹಾಗೆ ಬರೆದಿದ್ದೀರೆಂದು ಪ್ರಶ್ನಿಸಿದನು. ಅಷ್ಟೇ ಅಲ್ಲದೇ ನೀವು ಹೊಸ ಮತವನ್ನು ಸೃಷ್ಟಿಸುತ್ತೀರಾ? ಎಂದು ಕೇಳಿದನು. ಆಗ ನಾವು ಆತನಿಗೆ ಸಮಾಧಾನ ಹೇಳಬೇಕೆಂದು ಹೀಗೆ ಕೇಳಿದೆವು.

**ನಾವು :–** ನಾವು ಇಂದೂಧರ್ಮ ಎಂದು ಬರೆದರೆ ಬಹಳ ಜನ ಇದನ್ನು

ಕುರಿತು ಏಕೆ ಹಾಗೆ ಬರೆದಿದ್ದೀರೆಂದು ಕೇಳಿದ್ದಾರೆ. ಆದರೆ ನೀವೇಕೆ ಹಾಗೆ ಕೇಳುತ್ತಿದ್ದೀರ. ನನಗೆ ಸಮಾಧಾನ ಹೇಳಿರಿ.

**ರಕ್ಷಕ** :– ನೀವು ಹಿಂದೂ ಎಂಬ ಪದವನ್ನು ತಪ್ಪಾಗಿ ಇಂದೂ ಎಂದು ಬರೆದಿದ್ದೀರ, ಹಾಗೆ ಬರೆದಿರುವುದು ಅಲ್ಲದೆ ಅದನ್ನೇ ಎಲ್ಲಾ ಕಡೆ ತೋರಿಸುತ್ತಿದ್ದೀರ, ಆದ್ದರಿಂದ ನೀವು ಏಕೆ ಹಾಗೆ ಬರೆದಿದ್ದೀರೆಂದು ಕೇಳುತ್ತಿದ್ದೇವೆ.

**ನಾವು** :– ನಾವು ಬರೆದ ಇಂದೂ ಎಂಬ ಶಬ್ಧ ತಪ್ಪು ಎನ್ನುವುದಕ್ಕೆ ನಿಮ್ಮ ಹತ್ತಿರ ಆಧಾರವೇನು ಇದೆ? ಹಾಗೇ ನೀವು ಹೇಳುತ್ತಿರುವ ಹಿಂದೂ ಎಂಬ ಶಬ್ಧ ಸರಿಯಾದದ್ದೆಂದು ಯಾವ ಆಧಾರದಿಂದ ಹೇಳುತ್ತಿದ್ದೀರಾ?

**ರಕ್ಷಕ** :– ಹಿಂದೂ ಎಂಬ ಶಬ್ಧವು ಸರಿಯಾದದ್ದೆಂದು ಎಲ್ಲರಿಗು ಗೊತ್ತಿದೆ. ಹಾಗೇ ಇಂದೂ ಎಂಬ ಶಬ್ಧ ತಪ್ಪು ಎಂದು ಮನುಷ್ಯರೆಲ್ಲರಿಗು ಗೊತ್ತಿದೆ. ಇದಕ್ಕಿಂತ ಆಧಾರ ಬೇಕೆ?

**ನಾವು** :– ಅಸತ್ಯವನ್ನು ಸಾವಿರ ಜನ ಹೇಳಿದರೂ, ಲಕ್ಷ ಜನ ಹೇಳಿದರೂ ಅದು ಸತ್ಯವಲ್ಲ. ಹಾಗೇ ಸತ್ಯವನ್ನು ಸಾವಿರ ಜನ ಅಲ್ಲ ಎಂದರೂ, ಲಕ್ಷ ಜನ ಅಲ್ಲವೆಂದರೂ ಅದೂ ಅಸತ್ಯವಲ್ಲ. ಆದ್ದರಿಂದ ಎಲ್ಲರಿಗು ತಿಳಿದಿದೆಯೆನ್ನುವುದು ಸರಿಯಾದ ಆಧಾರವಲ್ಲ. ಇನ್ನೂ ಏನಾದರೂ ನಿಮಗೆ ತಿಳಿದ ಸತ್ಯವಿದ್ದರೆ ಹೇಳಿರಿ.

**ರಕ್ಷಕ** :– ನಮ್ಮ ದೇಶದಲ್ಲಿ ಸಿಂಧೂನದಿ ಹರಿಯುತ್ತಿರುವುದರಿಂದ, ಸಿಂಧೂ ನಾಗರಿಕತೆ ನಮ್ಮ ದೇಶದಲ್ಲಿ ಇರುವುದರಿಂದ ನಮ್ಮ ದೇಶವನ್ನು ಸಿಂಧೂದೇಶ ಎನ್ನುತ್ತಿದ್ದರು. ಕಾಲಕ್ರಮೇಣ ಸಿಂಧೂ ಎಂಬ ಹೆಸರು ಹಿಂದೂ ಎಂಬ ಪದವಾಗಿ ಬದಲಾಗಿದೆ. ಆದ್ದರಿಂದ ನಮ್ಮ ದೇಶವನ್ನು ಹಿಂದೂ ದೇಶವೆಂದು, ಈ ದೇಶದಲ್ಲಿ ನಿವಾಸಿಸುವವರನ್ನು ಹಿಂದೂಗಳೆಂದು ಹೇಳುವುದು ನಡೆದಿದೆ. ಆ ವಿಧವಾಗಿ ಹಿಂದೂ ಎಂಬ ಶಬ್ಧ ಸರಿಯಾದದ್ದೆಂದು ಹೇಳುತ್ತಿದ್ದೇವೆ.

**ನಾನು** :– ನೀವು ಹೇಳುವುದು ಒಂದು ಪ್ರಾಂತದ ಹೆಸರು, ಒಂದು ದೇಶದ ಹೆಸರು. ಆದರೆ ಆ ಹೆಸರನ್ನು ನೀವು ಒಂದು ಮತಕ್ಕೆ ಏಕೆ ಅಂಟಿಸಿದ್ದೀರ?

**ರಕ್ಷಕ** :– ಪೂರ್ವವು ಭಾರತದೇಶದಲ್ಲಿ ಒಂದೇ ಒಂದು ಹೈಂದವ ಮತ ಇರುತ್ತಿತ್ತು. ಆದ್ದರಿಂದ ಹಿಂದೂದೇಶದಲ್ಲಿರುವ ಮತವನ್ನು ಹಿಂದೂ ಮತ ಎಂದಿದ್ದಾರೆ.

**ನಾನು** :– ಭಾರತದೇಶದಲ್ಲಿ ಸಿಂಧೂನದಿಗಿಂತ ಎಷ್ಟೋ ದೊಡ್ಡ ನದಿಗಳಾದ ಗಂಗ, ಬ್ರಹ್ಮಪುತ್ರ ನದಿಗಳಿವೆ. ಗಂಗಾನದಿ ಸಿಂಧೂನದಿಗಿಂತ ಪವಿತ್ರವಾದದ್ದು ಮತ್ತು ಎಷ್ಟೋ ದೊಡ್ಡದು. ಗಂಗಾನದಿಯೊಂದಿಗೆ ಹೋಲಿಸಿದರೆ ಯಾವುದರಲ್ಲೂ ಸರಿತೂಗದ ಸಿಂಧೂನದಿಯ ಹೆಸರನ್ನು ಭಾರತದೇಶಕ್ಕೆ ಇಡಬೇಕಾದ ಅವಶ್ಯವೇನು ಬಂದಿದೆ. ಅಂತಹ ಅವಶ್ಯವಿದ್ದರೆ ಗಂಗಾನದಿಗೆ ಇನ್ನೊಂದು ಹೆಸರಾಗಿ ಗಂಗಾದೇಶವೆಂದು ಹೆಸರು ಇಡಬಹುದಲ್ಲವೇ! ಇದಕ್ಕೇನನ್ನುತ್ತೀರ?

**ರಕ್ಷಕ** :– ನಮಗೆ ಪೂರ್ತಿ ವಿಷಯ ತಿಳಿದಿಲ್ಲ ಆದರೇ,ಸಿಂಧೂನದಿ ಹರಿಯುತ್ತಿರುವುದರಿಂದ ಸಿಂಧೂದೇಶವೆಂದು ಹೆಸರು ಬಂದಿದೆಯೆಂದು ಹಿರಿಯರು ಹೇಳುವುದನ್ನು ಕೇಳಿದ್ದೇನೆ.

**ನಾನು** :– ಈ ದಿನ ನಾವು ಬರೆದ ಇಂದೂ ಪದವನ್ನು ನೋಡಿ, ನೀವು ಬರೆದಿರುವುದು ತಪ್ಪು ಎಂದು ಗೋಸಿ ಇಟ್ಟುಕೊಂಡ ಪ್ರತಿಯೊಬ್ಬನು ಕೇಳುತ್ತಿದ್ದೀರ ಅಲ್ಲವೆ! ನಾವು ಬರೆದ ಇಂದೂಗೆ, ನೀವು ಬರೆದ ಹಿಂದೂಗೆ ಕಾಣಿಸುವ ಅಕ್ಷರದಲ್ಲಿ ಮಾತ್ರ ವ್ಯತ್ಯಾಸವಿದೆ. ಕೇಳಿಸುವ ಶಬ್ಧದಲ್ಲಿ ಗುರುತಿಸಬಹುದಾದ ವ್ಯತ್ಯಾಸ ಏನೂ ಇಲ್ಲ. ಅಕ್ಷರದಲ್ಲಿ ಹೊರತು ಶಬ್ಧದಲ್ಲಿ ಕಾಣಿಸದಿರುವುದನ್ನು ಎಲ್ಲರೂ ನಿಲ್ಲಿಸಿ ಕೇಳಿದಾಗ, ನೀವು ಹೇಳಿದಂತೆ ಸಿಂಧೂನದಿಯಿಂದ ಬಂದಿರುವುದು ಹಿಂದೂ ಎಂದು ನೀವೇಕೆ ಬರೆಯಬೇಕು? ಸಿಂಧೂನೆ ಎಂದು ಬರೆಯಬಹುದಲ್ಲವೆ! ಸಿಂಧೂ ದೇಶವೆಂದು, ಸಿಂಧೂ ಮತವೆಂದು ಹೇಳದೆ ಹಿಂದೂ ದೇಶ, ಹಿಂದೂ ಮತ ಎಂದು ಏಕೆ ಅನ್ನುತ್ತಿದ್ದೇವೆಂದು ನೀವು

ಆಲೋಚಿಸಿಕೊಳ್ಳಬಹುದಲ್ಲವೆ! ಪೂರ್ವವು ಮುಂಬಾಯಿ ಎಂಬ ಹೆಸರು ಕಾಲಕ್ರಮದಲ್ಲಿ ಬೊಂಬಾಯಿಯಂತೆ ಬದಲಾಗಿದೆಯೆಂದು ತಿಳಿದವರು, ಮುಂಬಾಯಿ ಹೆಸರನ್ನು ಪುನರುದ್ಧರಿಸಿ ಬೊಂಬಾಯಿಯನ್ನು ತೆಗೆದುಹಾಕಿ ಮುಂಬಾಯಿ ಎಂದು ಬರೆದಿದ್ದಾರೆ. ಹಾಗೆ ಪೂರ್ವದಲ್ಲಿ ಚೆನ್ನೈ ಎಂಬ ಹೆಸರು ಮದ್ರಾಸ್ ಎಂದು ಬದಲಾಗಿದೆಯೆಂದು ಬಾಧೆಪಟ್ಟವರು ಮದ್ರಾಸು ಹೆಸರನ್ನು ತೆಗೆದುಹಾಕಿ ಚೆನ್ನೈ ಎಂದು ಮತ್ತೆ ಆ ಹೆಸರನ್ನು ಬೆಳಕಿಗೆ ತಂದರು. ಆಗಿರುವಾಗ ಇಷ್ಟು ದೊಡ್ಡ ಭಾರತದೇಶಕ್ಕೆ ಪೂರ್ವವು ಸಿಂಧೂದೇಶವೆಂದು ಹೆಸರಿರುವಂತೆ ತಿಳಿದವರು ಆ ಹೆಸರು ಮುಂಬಾಯಿ ಬೊಂಬಾಯಿಯಂತೆ ಬದಲಾದಂತೆ ಸಿಂಧೂ ಹಿಂದೂವಾಗಿ ಕಾಲಕ್ರಮೇಣ ಬದಲಾಗಿದೆಯೆಂದು ವಿವರಿಸಿ ಹೇಳಿ, ಹಿಂದೂ ಎಂಬ ಪದವನ್ನು ತೆಗೆದುಹಾಕಿ ಸಿಂಧೂ ಎಂಬ ಪದವನ್ನು ಏಕೆ ಇಡಲಿಲ್ಲ? ಎಂದು ನಾನು ಕೇಳುತ್ತಿದ್ದೇನೆ. ಇದಕ್ಕೆ ನೀವು ಏನೆಂದು ಹೇಳುತ್ತೀರ?

**ರಕ್ಷಕ :–** ನೀವು ಹೇಳಿದಷ್ಟು ವಿವರವಾಗಿ ನಾವು ಆಲೋಚಿಸಲಿಲ್ಲ. ನೀವು ಹೇಳುವುದನ್ನು ಅನುಸರಿಸಿ ನೋಡಿದರೆ ಈಗ ನಾವು ತಪ್ಪಾಗಿ ಅರ್ಥೈಸಿಕೊಂಡಿದ್ದೇವಾ? ಅಥವಾ ಪೂರ್ವದ ಹಿರಿಯರೇ ತಪ್ಪಾಗಿ ಅರ್ಥೈಸಿಕೊಂಡಿದ್ದಾರಾ ಎಂದು ಅನುಮಾನ ಬರುತ್ತದೆ.

**ನಾನು :–** ನಾನು ಹೇಳಿರುವುದನ್ನು ಅನುಸರಿಸಿ ಈಗ ತಪ್ಪಾಗಿ ಅರ್ಥೈಸಿಕೊಂಡಿದ್ದೇವೆಂದು ಅಂದುಕೊಂಡರೇ ಸರಿಹೋಗದು. ಆ ತಪ್ಪು ನಾವು ಮಾಡಿದರೂ, ನಮ್ಮ ಹಿರಿಯರು ಮಾಡಿದರೂ ತಪ್ಪು ತಪ್ಪೇ ಆಗುತ್ತದೆ. ನೀವು ಪ್ರಸ್ತುತ ಮತರಕ್ಷಕರಾಗಿ ಇದ್ದಾಗ ಮತ ಚರಿತ್ರೆಯನ್ನಾಗಲಿ, ಮತದ ಹೆಸರು ಹೇಗೆ ಬದಲಾಗಿದೆ ಎಂದಾಗಲಿ ತಿಳಿದುಕೊಳ್ಳದಿದ್ದರೆ ಮತವನ್ನು ಹೇಗೆ ರಕ್ಷಿಸುತ್ತೀರ? ಎತ್ತು ಈದಿದೆ ಎಂದು ಯಾವನೊ ಹೇಳಿದರೆ ಎತ್ತು ಹೇಗೆ ಈಯುತ್ತದೆ? ಈಯಬೇಕಾಗಿರುವುದು ಆಕಳಲ್ಲವೆ! ಎಂದು ಆಲೋಚಿಸದೆ ಗ್ವಾದಲಿಗೆ ಕಟ್ಟಿಹಾಕೆನ್ನುವುದು ಪೂರ್ತಿ ತಪ್ಪಲ್ಲವೆ! “ಎತ್ತು ಈದಿದೆ ಎಂದರೆ

ಗ್ವಾದಲಿಗೆ ಕಟ್ಟಿಹಾಕು" ಎನ್ನುವ ಗಾದೆಯಂತೆ, ಕೇಳಿದ್ದನ್ನು ಆಲೋಚಿಸದೆ ಕುರುಡನಂತೆ ಹೋದಂತಾಗುತ್ತದೆ. ಒಂದು ಬಾರಿ ತಪ್ಪು ಹೆಜ್ಜೆ ಹಾಕಿದರೆ ಅದನ್ನು ಅನುಸರಿಸಿ ಎಲ್ಲ ತಪ್ಪು ಹೆಜ್ಜೆ ಹಾಕಬೇಕಾಗಿಬರುತ್ತದೆ. ಎತ್ತು ಈದಿದೆ ಎಂದರೆ ಗ್ವಾದಲಿಗೆ ಕಟ್ಟಿ ಹಾಕೆಂದವನು, ನಂತರ ಆಕಳು ಈದಿದೆ ಎನ್ನುವ ಮಾತನ್ನು ಕೇಳಿ, ಎತ್ತು ಅಲ್ಲವೆ ಈಯುವುದು ಆಕಳು ಈದಿದೆ ಎಂದು ಹೇಳುವುದು ತಪ್ಪಲ್ಲವೆ! ಎಂದನಂತೆ. ಅದೇ ವಿಧವಾಗಿ ಸಿಂಧೂನಿಂದ ಹಿಂದೂ ಬಂದಿದೆಯೆಂದು ಕೇಳಿದಾಗ, ಹೇಗೆ ಬಂದಿದೆಯೆಂದು ಕೇಳದೆ ಕುರುಡಾಗಿ ನಂಬಿದವರು, ಇಂದೂ ನಿಂದ ಹಿಂದೂ ಬಂದಿದೆಯೆಂದು ನಾವು ಹೇಳಿದರೆ ಕೇಳಿ ಸಿಂಧೂ ನಿಂದ ಅಲ್ಲವೆ ಹಿಂದೂ ಬರುವುದು, ಇಂದೂ ನಿಂದ ಹಿಂದೂ ಶಬ್ಧ ಬಂದಿದೆಯೆಂದು ಹೇಳುವುದು ತಪ್ಪಲ್ಲವೆ ಎಂದು ಕೇಳುತ್ತಿದ್ದಾರೆ. ಕಳೆದ ಯುಗಗಳಲ್ಲಿಯು, ಕೊನೆಯ ದ್ವಾಪರ ಯುಗದಲ್ಲಿಯು, ಇಂದೂ ಎಂಬ ಪದವೆ ಇದ್ದಂತೆ ಚರಿತ್ರೆ ಹೇಳುತ್ತಿದ್ದರೂ, ಕಾಲಕ್ರಮೇಣ ಕಲಿಯುಗದಲ್ಲಿ ಇಂದೂ ಎಂಬ ಪದ ಹಿಂದೂವಾಗಿ ಬದಲಾಗಿ ಹೋಗಿದೆಯೆಂದು ಹೇಳಿ, ಬೊಂಬಾಯಿಯನ್ನು ಮುಂಬಾಯಿಯಂತೆ ಬದಲಾಯಿಸಿಕೊಂಡಂತೆ ಹಿಂದೂ ಪದವನ್ನು ಬದಲಾಯಿಸಿ ಇಂದೂ ಎಂದು ನಾವು ಬರೆಯುವುದೆ ಅಲ್ಲದೆ ಹಾಗೆ ಬರೆಯುವುದಕ್ಕೆ ಬೇಕಾದ ವಿವರವೆಲ್ಲಾ ಹೇಳುತ್ತಿದ್ದರೂ ಗ್ರಹಿಸದವರು, ಎತ್ತು ಈದಿದೆ ಎನ್ನುವುದೇ ಸರಿಯಾದದ್ದು, ಆಕಳು ಈದಿದೆ ಎನ್ನುವುದು ತಪ್ಪು ಎನ್ನುವಂತಿದೆ. ಈಗ ಹೇಳಿರಿ ನೀವು ಇಂದೂಗಳಾ, ಸಿಂಧೂಗಳಾ?

**ರಕ್ಷಕ :–** ಇಷ್ಟು ಕೇಳಿದ ನಂತರವೂ ಸಹ ಸಿಂಧೂ, ಹಿಂದೂ ಎನ್ನುವುದು ಪೂರ್ತಿ ತಿಳುವಳಿಕೆಯಿಲ್ಲದ ಕೆಲಸವಾಗುತ್ತದೆ. ನೀವು ಹೇಳಿದಂತೆ ವಾಸ್ತವಕ್ಕೆ ನಾವು ಇಂದೂಗಳೆ, ಆದರೆ ತಪ್ಪಾಗಿ ಹಿಂದೂಗಳೆಂದು ಹೇಳಿಕೊಳ್ಳುತ್ತಿದ್ದೇವೆ. ಎಲ್ಲವೂ ತಿಳಿದ ನಂತರ ನೀವು ಬರೆದ ಇಂದೂ ಎನ್ನುವ ಮಾತು ಸರಿಯಾದದ್ದೆಂದು ತಿಳಿಯುತ್ತಿದೆ. ನಾವು ಆಲೋಚಿಸದೆ ಇಂದೂ ಧರ್ಮವನ್ನು ಕುರಿತು ಎಷ್ಟೋ ತಿಳಿದ ನಿಮ್ಮನ್ನು ತಪ್ಪಾಗಿ ಲೆಕ್ಕಹಾಕಿಕೊಂಡು ಚಿಕ್ಕದಾಗಿ

ಮಾತನಾಡಿರುವುದಕ್ಕೆ ನಮ್ಮದು ಬಹಳ ತಪ್ಪು. ನಿಮ್ಮಂತವರಿಂದಲೆ ಇಂದೂಧರ್ಮ ಇಂದೂಮತದಲ್ಲಿ ಬೆಳಕಿಗೆ ಬರುವುದೆಂದು ಅಂದುಕೊಳ್ಳುತ್ತೇನೆ.

**ನಾನು** :– ನೀವು ಪದ್ಧತಿಯಾಗಿ ಕೇಳಿದ್ದೀರಾದ್ದರಿಂದ ನಾನು ವಿವರವಾಗಿ ಹೇಳುವುದಕ್ಕೆ ಅವಕಾಶ ಬಂದಿದೆ. ಆದರೆ ಕೆಲವರು ಹಿಂದೂ ಮತವನ್ನು ಉದ್ಧರಿಸುತ್ತೇವೆಂದು ಹೇಳಿಕೊಳ್ಳುವವರು, ಸ್ವಲ್ಪವಾದರೂ ಹಿಂದೂ ಮತ ಚರಿತ್ರೆ ತಿಳಿಯದವರಾಗಿ, ಆತ್ಮ ಜ್ಞಾನ ಸ್ವಲ್ಪವೂ ಸಹ ತಿಳಿಯದವರಾಗಿ, ಪೂರ್ತಿ ಅಜ್ಞಾನಿಗಳಾಗಿ ಇದ್ದೂ ಇಂದೂ ಎಂಬ ಪದವನ್ನು ಕೇಳುತ್ತಲೆ ಸ್ವಲ್ಪವಾದರೂ ವಿವರ ಕೇಳದೆ ಇಂದೂಪದ ಪರಮತದೊಳಗಿರುವುದೆಂದು ಅನ್ನುತ್ತಾರೆ. ಹಿಂದೂಗಳಾಗಿರುವವರು ಮತದ ಮೇಲಿನ ಪ್ರೇಮವನ್ನು, ಅಭಿಮಾನವನ್ನು ಬೆಳೆಸಿಕೊಳ್ಳಬಹುದು. ಮತದ ಮೇಲಿನ ಪ್ರೇಮ ಮತಕ್ಕೆ ಕೆಡಕಾಗಬಾರದು. ಕೆಲವರು ಸ್ವಮತಾಭಿಮಾನಿಗಳು ನಾವು ಹಿಂದೂಗಳೆಂದು ಹೇಳಿಕೊಳ್ಳುತ್ತಾ ನಮ್ಮನ್ನು ನೋಡಿ ನೀವು ಹಿಂದೂಗಳು ಅಲ್ಲ, ಹಿಂದೂಗಳ ಮುಸುಗಿನಲ್ಲಿರುವ ಇತರೆ ಮತದವರು ಎಂದು ನಮ್ಮನ್ನು ಅನ್ನುವುದು ಹೇಗಿದೆಯೆಂದರೆ! ಒಬ್ಬ ವ್ಯಕ್ತಿ ತನ್ನ ತಂದೆ ಮೇಲೆ ಹೆಚ್ಚಿನ ಪ್ರೇಮದಿಂದಿದ್ದು. ಆತನು ತನ್ನ ತಂದೆ ಮೇಲಿನ ಪ್ರೇಮದಿಂದ ಆತನಿಗೆ ಎಂತಹ ಅಸೌಕರ್ಯ ಆಗದಂತೆ ನೋಡಬೇಕೆಂದುಕೊಂಡನಂತೆ. ಆಗಿರುವಾಗ ಒಂದು ಸಮಯದಲ್ಲಿ ಒಂದು ನೊಣ ಆತನ ತಂದೆ ಮೇಲೆ ಕುಳಿತುಕೊಂಡಿತಂತೆ. ಆಗ ಆ ನೊಣವನ್ನು ನೋಡಿದ ಮಗನಿಗೆ ಕೋಪಬಂದು ತನ್ನ ತಂದೆ ಮೇಲೆ ಕುಳಿತು ಆತನ ಸೌಕರ್ಯಕ್ಕೆ ಭಂಗ ತಂದ ನೊಣವನ್ನು ಸಾಯಿಸಬೇಕೆಂದು ಒಂದು ಕೋಲನ್ನು ತೆಗೆದುಕೊಂಡು ನೊಣವನ್ನು ಹೊಡೆದನಂತೆ. ತಂದೆ ಮೇಲೆ ಮಗನಿಗೆ ಇರುವ ಪ್ರೇಮದಿಂದ ಸ್ವಲ್ಪವಾದರೂ ಮಗ ಆಲೋಚಿಸದೆ ನೊಣವನ್ನು ಹೊಡೆದಾಗ ನೊಣ ತಪ್ಪಿಸಿಕೊಂಡು ಹೋಯಿತು. ಆ ಕೋಲಿನ ಏಟು ಆತನ ತಂದೆಗೆ ಬಿದ್ದು ತಂದೆ ಸತ್ತುಹೋದನು. ತಂದೆ ಮೇಲೆ ಮಗನಿಗಿದ್ದ ಪ್ರೇಮವೆ ತನ್ನ ತಂದೆ ಸಾವಿಗೆ ಕಾರಣವಾಯಿತು. ಹಾಗೇ ಈ ದಿನ ಹಿಂದೂಗಳಲ್ಲಿ ಕೆಲವರಿಗೆ ಮತದ

ಮೇಲೆ ಅಭಿಮಾನ ಹೆಚ್ಚಾಗಿ ಹೋಗಿದೆ. ಅವರ ಮತಾಭಿಮಾನ ವಿಚಕ್ಷಣೆಯನ್ನು ಕಳೆದುಕೊಳ್ಳುವಂತೆ ಮಾಡಿ ತಂದೆಯಂತಹ ಸ್ಥಾನದಲ್ಲಿರುವ ಇಂದೂಧರ್ಮ ಸಿದ್ಧಾಂತ ಕರ್ತನಾದ ನಮ್ಮ ಮೇಲೆ ಸಹ ದಾಳಿ ಮಾಡುವುದು, ನಾವು ಬರೆದ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಸುಟ್ಟುಹಾಕುವುದು ನೋಡಿದರೆ, ಅವರ ಹಿಂದೂ ಮತಾಭಿಮಾನ ನೊಣವಾಲಿದರೆ ಒನಕೆ ತೆಗೆದುಕೊಂಡಂತಿದೆ. ಇಂತಹ ಸಂಘಟನೆಗಳಿಂದ ಮಗ ತಂದೆಯನ್ನು ನೊಣಕ್ಕೋಸ್ಕರ ಹೊಡೆದಂತೆ, ಹಿಂದೂ ಮತಕ್ಕೇ ಸಿದ್ಧಾಂತಕರ್ತನಾದ ಒಬ್ಬ ಯೋಗೀಶ್ವರನನ್ನು ಸಾಧಾರಣ ಹಿಂದೂಗಳು ಸ್ವಮತಾಭಿಮಾನದಿಂದ ಅವಗಾಹನೆ ಲೋಪದಿಂದ ತೊಂದರೆಗಳಿಗೀಡು ಮಾಡುತ್ತಿದ್ದಾರೆ. ಈಗಿನಿಂದಲಾದರು ಇಂದೂ (ಹಿಂದೂ) ಮತ ಚೆನ್ನಾಗಿ ಆಗಬೇಕೆಂದರೆ ನಾವು ತಿಳಿಸುವ ಜ್ಞಾನವನ್ನು ನೋಡಿರಿ. ವಿವರ ಕೇಳಿ ತಿಳಿದುಕೊಳ್ಳಿ. ಆಗ ನೀವು ನಿಜವಾದ ಹಿಂದೂಗಳಾಗಿ (ಇಂದೂಗಳಾಗಿ) ಬದಲಾಗುವಿರಿ. ಹಾಗಲ್ಲದೆ ಇಂದೂಜ್ಞಾನ ತಿಳಿಯದೆ ನಾನು ಹಿಂದುವು ಎಂದುಕೊಂಡರೆ ಹುಲಿ ಚರ್ಮ ಒದ್ದುಕೊಂಡ ಕುರಿ ನಾನು ಹುಲಿ ಅಂದುಕೊಂಡಂತಿರುತ್ತದೆ.

ಈ ವಿಧವಾಗಿ ಸಂವಾದ ಮುಂದುವರೆದ ನಂತರ ಹಿಂದೂಮತ ರಕ್ಷಕನಾದ ಆ ವ್ಯಕ್ತಿ, ತನಗೆ ಹಿಂದೂ ಮತವನ್ನು ಕುರಿತಾದ ಸಮಾಚಾರ ಪೂರ್ತಿಯಾಗಿ ತಿಳಿದಿಲ್ಲ. ಹಿಂದೂಗಳಿಗಿರಬೇಕಾದ ಜ್ಞಾನವಿಲ್ಲ. ಹೀಗಿರುವಾಗ ತಾನು ಹಿಂದೂಮತ ರಕ್ಷಣೆ ಮಾಡುತ್ತೇನೆಂದು ಅಂದುಕೊಳ್ಳುವುದು ತಪ್ಪೆಂದು, ಈಗಿನಿಂದ ದೈವಜ್ಞಾನ ತಿಳಿದುಕೊಳ್ಳುತ್ತೇನೆಂದು ಹೇಳಿ ಹೋದನು. ಹೀಗೆ ಎಷ್ಟೋ ಜನ ಸತ್ಯವನ್ನು ತಿಳಿದ ನಂತರ ತಾವು ಮಾಡುತ್ತಿರುವುದು ತಪ್ಪೆಂದು ತಿಳಿದು ತಮ್ಮ ತಪ್ಪನ್ನು ಸರಿ ಮಾಡಿಕೊಳ್ಳುವರು. ಕೆಲವರು ಎದುರಿಗಿರುವವನು ಹೇಳುವುದು ನಾನು ಕೇಳಬೇಕಾ ಎಂಬ ಗರ್ವದಿಂದ ತಪ್ಪನ್ನು ಮಾಡುತ್ತಿರುವರು. ಪ್ರತಿ ಹಿಂದುವು ತಾವು ಮಾತನಾಡುತ್ತಿರುವ ಹಿಂದೂ ಎಂಬ ಪದಕ್ಕೆ ಅರ್ಥವಿದೆಯಾ ಎಂದು ನೋಡಬೇಕು. ಹಿಂದೂ ಎಂದರೆ ಅಸಲು ಅರ್ಥವೇನು

ಎಂದು ಪ್ರಶ್ನಿಸಿಕೊಂಡು ನೋಡಬೇಕು. ಹಾಗಾದರೇನೆ ಮನುಷ್ಯ ತಾನು ಯಾರೊ? ತನ್ನ ಮತಯಾವುದೊ? ತಾನು ತಿಳಿಯಬೇಕಾಗಿರುವುದೇನೊ ಗ್ರಹಿಸಬಲ್ಲನು. ಇಲ್ಲದೆ ಹೋದರೆ ಅವರ ಜೀವನ ಎತ್ತು ಈದಿದೆಯೆಂದರೆ ಗ್ವಾದಲಿಗೆ ಕಟ್ಟಿಹಾಕು ಎಂದಂತೆ ಹೊರಗಿನ ವಿಷಯಗಳಲ್ಲಿ ಕುರುಡನಂತಿರುವನು. ಹಾಗೆ ಕುರುಡಾಗಿ ಬದುಕುವವನು ತಾನು ಏನು ಮಾಡುತ್ತಿದ್ದೇನೆಂಬ ವಿಚಕ್ಷಣೆಯಿಲ್ಲದವನಾಗಿ, ನೊಣ ವಾಲಿದೆಯೆಂದರೆ ಒನಕೆ ತೆಗೆದುಕೊಂಡಂತೆ ತನಗೆ ತಾನು ನಷ್ಟ ಹೋಗುವನು. ಪವಿತ್ರವಾದ ಜೀವನವನ್ನು ಅಪವಿತ್ರವಾಗಿ ಕಳೆದು ಪಾಪವನ್ನು ಮೂಟೆಕಟ್ಟಿಕೊಂಡು ಹೋಗಬೇಕಾಗಿರುತ್ತದೆ. ಆದ್ದರಿಂದ ಇಂದೂವಾಗಿ ಹುಟ್ಟಿ, ಇಂದೂವಾಗಿ ಬದುಕಿ, ಇಂದೂವಾಗಿ ಸಾಯೆಂದು ಹೇಳುತ್ತಿದ್ದೇನೆ. ಇದೇ ಪದವನ್ನೇ ಪೂರ್ತಿ ಅರ್ಥವಾಗುವಂತೆ ಹೇಳಿದರೆ ಜ್ಞಾನಿಯಾಗಿ ಹುಟ್ಟಿ, ಜ್ಞಾನಿಯಾಗಿ ಮೆಟ್ಟಿ ಜ್ಞಾನಿಯಾಗಿ ಸಾಯೆಂದು ಹೇಳುತ್ತಿದ್ದೇವೆ.

ಸೃಷ್ಠಿ ಆರಂಭವಾದಾಗ ಮನುಷ್ಯರನ್ನು ಹೊರತು ಮತಗಳು ಇಲ್ಲ. ಮನುಷ್ಯರ ಜೀವನ ಪಶುಗಳ ಜೀವನದ ಹಾಗೆ ಆಗದಂತಿರುವುದಕ್ಕೆ ದೇವರು ಮೊದಲೇ ತನ್ನ ಜ್ಞಾನವನ್ನು ಮನುಷ್ಯನಿಗೆ ಹೇಳಿ ಹೋಗಿದ್ದಾನೆ. ಆದಿಯಲ್ಲಿಯೇ ದೇವರು ಹೇಳಿದ ಜ್ಞಾನವನ್ನು ಮನುಷ್ಯರೆಲ್ಲರೂ ಆಚರಿಸುತ್ತಿದ್ದರು. ಆದ್ದರಿಂದ ಆ ದಿನ ಎಲ್ಲರೂ ದೈವಧರ್ಮಗಳು ತಿಳಿದ ಜ್ಞಾನಿಗಳಂತೆ ಇರುತ್ತಿದ್ದರು. ದೇವರು ಸೃಷ್ಠಿ ಆದಿಯಲ್ಲಿ ಸೂರ್ಯನಿಗೆ ಜ್ಞಾನ ಹೇಳಿದಾಗ, ಸೂರ್ಯನು ಭಾರತ ದೇಶದಲ್ಲಿನ ಮನುವು ಎಂಬ ಮಹರ್ಷಿಗೆ ಹೇಳಿದಾಗ, ಮನುವು ಇಕ್ಷ್ವಾಕನೆಂಬ ರಾಜನಿಗೆ ಹೇಳಿದನು. ಈ ವಿಧವಾಗಿ ದೇವರು ಹೇಳಿದ ಜ್ಞಾನ ಮೊಟ್ಟಮೊದಲು ಭೂಮಿ ಮೇಲಿರುವ ಭಾರತದೇಶದಲ್ಲಿಯೆ ತಿಳಿದಿದೆ. ಆದ್ದರಿಂದ ಒಟ್ಟು ಪ್ರಪಂಚದಲ್ಲಿ ಭಾರತದೇಶದಲ್ಲಿಯೆ ಮೊದಲು ಜ್ಞಾನಿಗಳು ತಯಾರಾದರು. ಸೂರ್ಯನಿಂದ ಒಬ್ಬ ಋಷಿಗೆ ಜ್ಞಾನ ತಿಳಿದಾಗ, ಆ ಋಷಿಯಿಂದ ಒಬ್ಬ ರಾಜನಿಗೆ ತಿಳಿಯಿತು. ಪಾಲಕನಾದ ಆ ಪ್ರಭುವಿನ ಮುಖಾಂತರ ಪ್ರಜೆಗಳಿಗೆ

ತಿಳಿದು ಹೋಯಿತು. ಈ ವಿಧವಾಗಿ ಕಾಡಿನಲ್ಲಿ ಮಹರ್ಷಿಗಳಿಗೆ, ಊರಿನಲ್ಲಿನ ಮನುಷ್ಯರಿಗೆ ಎಲ್ಲರಿಗೂ ದೇವರ ಜ್ಞಾನ ತಿಳಿಯಿತು. ಭೂಮಿ ಮೇಲೆ ಒಂದು ಭಾರತದೇಶದಲ್ಲಿನ ಮನುಷ್ಯರೆ ಪೂರ್ತಿ ಜ್ಞಾನ ತಿಳಿದವರಂತೆ ಇರುತ್ತಿದ್ದರು. ಉಳಿದ ದೇಶದವರಿಗೆ ಆ ದಿನ ದೈವಜ್ಞಾನ ತಿಳಿದಿರಲಿಲ್ಲ. ದೈವಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಉಳಿದ ದೇಶಗಳ ರಾಜರು ಸಹ ಭಾರತದೇಶದಲ್ಲಿನ ಗುರುಗಳ ಬಳಿಗೆ ಬಂದು ತಿಳಿದುಕೊಂಡು ಹೋಗುತ್ತಿದ್ದರು. ಭಾರತದೇಶ ದೈವಜ್ಞಾನಕ್ಕೆ ನಿಲಯವೆಂದು ಆ ದಿನ ಉಳಿದ ದೇಶದವರಿಗೆಲ್ಲ ತಿಳಿದು ಹೋಯಿತು. ಆದ್ದರಿಂದ ಉಳಿದ ದೇಶದವರೆಲ್ಲರೂ ಜ್ಞಾನಕ್ಕೆ ನಿಲಯವಾದ ದೇಶ ಭಾರತದೇಶವೆಂದು, ಭಾರತದೇಶವನ್ನು ಜ್ಞಾನಿಗಳ ದೇಶ ಎಂದಿದ್ದಾರೆ. ಜ್ಞಾನಿಯನ್ನು ಇಂದೂ ಎಂದು ಕರೆಯುತ್ತಿದ್ದರು. ಆದ್ದರಿಂದ ಭಾರತದೇಶವನ್ನು ಇಂದೂಗಳ ದೇಶವೆಂದು ಹೇಳುವುದು ನಡೆದಿದೆ. ಇಂದೂ ಎಂದರೆ ಜ್ಞಾನವೆಂದು, ಇಂದೂ ಎಂದರೆ ಜ್ಞಾನಿ ಎಂದು ಅರ್ಥ. ಭಾರತದೇಶ ಜ್ಞಾನಕ್ಕೆ ನಿಲಯವಾದ ದೇಶ. ಆದ್ದರಿಂದ ಭಾರತದೇಶವನ್ನು ಇಂದೂದೇಶವೆಂದು, ಭಾರತದೇಶದಲ್ಲಿನ ಜ್ಞಾನಿಗಳನ್ನು ಇಂದೂಗಳೆಂದು ಇತರೆ ದೇಶದವರು ಕರೆಯುವುದು ನಡೆದಿದೆ. ಚರಿತ್ರೆಯನ್ನು ಬಗೆದು ನೋಡಿದರೆ ಇಂದೂಗಳ ಚರಿತ್ರೆ ಈ ವಿಧವಾಗಿ ಇದೆಯೆಂದು ತಿಳಿಯುತ್ತಿದೆ. ಸೃಷ್ಠಿ ಆದಿಯಿಂದ ಇರುವ ಚರಿತ್ರೆಯನ್ನು ತಿಳಿಯದವರು ಸಿಂಧೂನದಿ ಹಿಂದೂಮತ ಎಂದು ಸರಿಮಾಡಿ ಹೇಳಿಕೊಳ್ಳುತ್ತಿದ್ದಾರೆ.

ಪೂರ್ವದಲ್ಲಿ ಯಾವತ್ ಪ್ರಪಂಚ ಭಾರತದೇಶಕ್ಕೆ ಇಂದೂದೇಶವೆಂದು ಒಂದು ಬಿರುದನ್ನು ಕೊಟ್ಟು ಕರೆದರೆ, ಈದಿನ ಭಾರತದೇಶದಲ್ಲಿರುವವರು ಚರಿತ್ರೆಯನ್ನು ಮರೆತು ನಾವು ಇಂದೂಗಳಲ್ಲ ಹಿಂದೂಗಳೆಂದು ಹೇಳುವುದು ನೋಡಿದರೆ, ನಾವು ಜ್ಞಾನಿಗಳಲ್ಲ ಜಾನಿಗಳು ಎಂದು ಹೇಳಿದಂತಿದೆ. ಇಂದೂ ಎಂಬ ಪದ ದೈವಮಾರ್ಗವಾದ ಜ್ಞಾನ. ಹಿಂದೂ ಎಂಬ ಪದ ಒಂದು ನದಿ ನಾಮವನ್ನು ತಿಳಿಸುತ್ತದೆ. **‘ಇಂದೂ’ನಲ್ಲಿ ದೈವಜ್ಞಾನವಿದೆ. ‘ಹಿಂದೂ’ನಲ್ಲಿ**

**ಸಿಂಧೂಜಲವಿದೆ.** ಯಾವ ಹೆಸರು ಇಟ್ಟುಕೊಂಡರೆ ಚೆನ್ನಾಗಿರುತ್ತದೊ ನೀವೆ ಹೇಳಿರಿ. ಈಗೊಂದು ಉದಾಹರಣೆಯನ್ನು ನೋಡೋಣ. ಇಬ್ಬರು ವ್ಯಕ್ತಿಗಳು ಉದ್ಯೋಗಕ್ಕಾಗಿ ತಮಗೆ ಪರಿಚಯವಿದ್ದ ಮಂತ್ರಿ ಬಳಿಗೆ ಹೋಗಿ ನಿನಗೆ ಮತವನ್ನು ಹಾಕಿ, ಹಾಕಿಸಿ ಗೆಲ್ಲಿಸಿದ್ದೇವೆ ಅಲ್ಲವೆ! ಈಗ ನೀನು ಮಂತ್ರಿಯಾಗಿದ್ದೀಯ, ನಿನಗೆ ಅಧಿಕಾರವಿದೆ. ಆದ್ದರಿಂದ ನಮಗೆ ಉದ್ಯೋಗಗಳನ್ನು ಕೊಡಿಸೆಂದು ಕೇಳಿದರು. ಆಗ ಆ ಮಂತ್ರಿಯವರು ಅವರು ತನ್ನನ್ನು ಗೆಲ್ಲಿಸಿದ್ದಕ್ಕೆ ಅವರಿಗೆ ಉದ್ಯೋಗಗಳು ಕೊಡಬೇಕೆಂದುಕೊಂಡು ಯಾವ ಉದ್ಯೋಗಗಳಿವೆಯೆಂದು ಅಧಿಕಾರಿಗಳನ್ನು ಕೇಳಿ ತಿಳಿದುಕೊಂಡು ತನ್ನ ಊರಿನವರೊಂದಿಗೆ ಹೀಗೆ ಹೇಳಿದನಂತೆ. ನಾನು ನಿಮಗಾಗಿ ಉದ್ಯೋಗಗಳನ್ನು ಕುರಿತು ಅಧಿಕಾರಿಗಳನ್ನು ವಿಚಾರಿಸಿದರೆ ಎರಡು ಉದ್ಯೋಗಗಳು ಖಾಲಿ ಇವೆಯಂತೆ. ಅದರಲ್ಲಿ ಒಂದು ಕಲೆಕ್ಟರ್ ಉದ್ಯೋಗ, ಎರಡನೆಯದು ಬಿಲ್‌ಕಲೆಕ್ಟರ್ ಉದ್ಯೋಗವೆಂದು ಹೇಳಿ ಯಾರಿಗೆ ಯಾವುದು ಬೇಕೆಂದು ಕೇಳಿದನು. ಆಗ ಉದ್ಯೋಗಕ್ಕಾಗಿ ಬಂದ ಆ ಇಬ್ಬರು ಒಬ್ಬರ ಮೇಲೆ ಒಬ್ಬರು ಪೋಟಿ ಬಿದ್ದು ನನಗೆ ಬಿಲ್‌ಕಲೆಕ್ಟರ್ ಉದ್ಯೋಗ ಬೇಕೆಂದು ಒಬ್ಬನು ಕೇಳಿದರೆ, ಎರಡನೆಯವನು ಸಹ ಬಿಲ್‌ಕಲೆಕ್ಟರ್ ಉದ್ಯೋಗ ನನಗೆ ಬೇಕೆಂದು ಕೇಳಿದನಂತೆ. ಆಗ ಆ ಮಂತ್ರಿಯವರು ಯಾರ ಮಾತನ್ನು ಇಲ್ಲವೆನ್ನದೆ ಇಬ್ಬರಿಗು ಬಿಲ್‌ಕಲೆಕ್ಟರ್ ಉದ್ಯೋಗ ಕೊಡುತ್ತೇನೆಂದು ಒಪ್ಪಿಕೊಂಡು ಆಗ ತಕ್ಷಣವೆ ಇಬ್ಬರಿಗೂ ಬಿಲ್ ಕಲೆಕ್ಟರ್ ಉದ್ಯೋಗ ಕೊಟ್ಟನಂತೆ. ಇದೆಲ್ಲವು ಗಮನಿಸಿದ ಮಂತ್ರಿ ಕೆಳಗಿರುವ ಕಾರ್ಯದರ್ಶಿ ಅವರಿಬ್ಬರನ್ನು ಕರೆದು, ಕಲೆಕ್ಟರ್ ಉದ್ಯೋಗ ಬೇಡವೆಂದು ಇಬ್ಬರೂ ಬಿಲ್‌ಕಲೆಕ್ಟರ್ ಉದ್ಯೋಗವನ್ನು ಏಕೆ ಕೇಳಿದ್ದೀರೆಂದು ಕೇಳಿದಾಗ! ಅವರು ಆತನಿಗೆ ಹೀಗೆ ಸಮಾಧಾನ ಹೇಳಿದರಂತೆ. ಅದು ಬರಿ ಕಲೆಕ್ಟರ್ ಅಲ್ಲವೆ, ಇದಾದರೆ ಬಿಲ್ಲು ಸಹ ಇದೆಯೆಂದು ಕೇಳಿದೆವೆಂದು ಹೇಳಿದರು. ಆ ಮಾತು ಕೇಳಿದ ಕಾರ್ಯದರ್ಶಿಗೆ ಏನೂ ಅರ್ಥವಾಗದೆ "ನಿಮ್ಮ ಲೆಕ್ಕದಲ್ಲಿ ಕಲೆಕ್ಟರ್ ದೊಡ್ಡದಾ ಅಥವಾ ಬಿಲ್‌ಕಲೆಕ್ಟರ್ ದೊಡ್ಡದಾ" ಎಂದು ಕೇಳಿದನು. ಆಗ ಅವರು ನಕ್ಕು ಈತನು ಎಷ್ಟು ತಿಳಿವಳಿಕೆ ಇಲ್ಲದವನಾಗಿ ಕೇಳುತ್ತಿದ್ದಾನೆಂದು

ಅಂದುಕೊಂಡು "ಏನಯ್ಯಾ ಕಲೆಕ್ಟರ್‌ಗಿಂತ ಹೆಚ್ಚಾಗಿ ಬಿಲ್ಲು ಇರುವ ಕಲೆಕ್ಟರ್ ಕಾಣಿಸುತ್ತಾ ಇದೆಯಲ್ಲವೆ! ಇದರ ಪ್ರಕಾರ ಕಲೆಕ್ಟರ್‌ಗಿಂತ ಬಿಲ್ ಕಲೆಕ್ಟರೆ ದೊಡ್ಡದು" ಎಂದು ವಿವರವಾಗಿ ಹೇಳಿದರಂತೆ. ಆ ಮಾತುಗಳನ್ನು ಕೇಳಿದ ಮಂತ್ರಿಯವರ ಕಾರ್ಯದರ್ಶಿ ಒಳಗೊಳಗೆ ನಕ್ಕನು. ಇವರಿಬ್ಬರು ಕಾರ್ಯದರ್ಶಿಯನ್ನು ನೋಡಿ ಎಷ್ಟು ತಿಳುವಳಿಕೆ ಇಲ್ಲದವನೊ ಎಂದು ಹೊರಗೆ ಕಾಣಿಸುವಂತೆ ನಕ್ಕರು.

ಮೇಲಿನ ಉದಾಹರಣೆಯಲ್ಲಿ ಕಲೆಕ್ಟರ್‌ಗಿಂತ ಬಿಲ್‌ಕಲೆಕ್ಟರೆ ದೊಡ್ಡದು ಅಂದುಕೊಂಡಂತೆ ಪ್ರಸ್ತುತಕಾಲದಲ್ಲಿ ಇಂದೂ ಎನ್ನುವ ಪದಕ್ಕಿಂತ ಹಿಂದೂ ಎಂಬ ಪದವೇ ದೊಡ್ಡದೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಮೇಲಿನ ಉದಾಹರಣೆಯಲ್ಲಿ ಕಲೆಕ್ಟರ್‌ಗೂ, ಬಿಲ್ ಕಲೆಕ್ಟರ್‌ಗೂ ಇರುವ ವ್ಯತ್ಯಾಸ ತಿಳಿಯದೆ ಅವರು ಬಿಲ್‌ಕಲೆಕ್ಟರೆ ದೊಡ್ಡದೆಂದುಕೊಂಡಂತೆ ಈದಿನ ಇಂದೂವಿಗೆ, ಹಿಂದೂವಿಗೆ ವ್ಯತ್ಯಾಸ ತಿಳಿಯದೆ ಹಿಂದೂ ಎನ್ನುವ ಪದವೆ ದೊಡ್ಡದೆಂದುಕೊಂಡು ಎಲ್ಲರೂ ನಾವು ಹಿಂದೂಗಳೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಯಾರು ಹೇಗೆ ಅಂದುಕೊಂಡರೂ ಬಿಲ್‌ಕಲೆಕ್ಟರ್‌ಗಿಂತ ಕಲೆಕ್ಟರೆ ದೊಡ್ಡವನಾದಂತೆ, ಹಿಂದೂ ಎನ್ನುವ ಪದಕ್ಕಿಂತ ಇಂದೂ ಎನ್ನುವ ಪದವೆ ದೊಡ್ಡದು. ಬಿಲ್‌ಕಲೆಕ್ಟರ್‌ಗೂ ಕಲೆಕ್ಟರ್‌ಗೂ ಎಷ್ಟು ವ್ಯತ್ಯಾಸವಿದೆಯೊ, ಅಷ್ಟು ವ್ಯತ್ಯಾಸ ಹಿಂದೂ ಎನ್ನುವ ಪದಕ್ಕೂ, ಇಂದೂ ಎನ್ನುವ ಪದಕ್ಕೂ ಇದೆ. ಹಿಂದೂ ಒಂದು ಮತವನ್ನು ಮಾತ್ರವೆ ತೋರಿಸಿದರೆ, ಇಂದೂ ಎನ್ನುವ ಪದ ದೈವ ಜ್ಞಾನವನ್ನು ತೋರಿಸುತ್ತಿದೆ. ಹಿಂದೂ ಎನ್ನುವ ಪದ ಸಿಂಧ್‌ೂನಿಂದ ಬದಲಾಗಿಬಂದಿರುವುದಾದರೆ, ಇಂದೂ ಎನ್ನುವುದು ಎಂದಿಗೂ ಬದಲಾಗದಂತೆ ಇದೆ. ಹಿಂದೂ ಎನ್ನುವುದು ಒಂದು ಮತವನ್ನು ತೋರಿಸುತ್ತಿದೆ. ಇಂದೂ ಎನ್ನುವುದು ಒಂದು ಪಥವನ್ನು ತೋರಿಸುತ್ತಿದೆ. ಹಿಂದೂ ಎನ್ನುವುದು ಮಾಯೆ ಮತವನ್ನು ತೋರಿಸಿದರೆ, ಇಂದೂ ಎನ್ನುವುದು ದೈವ ಪಥವನ್ನು ತೋರಿಸುತ್ತಿದೆ. ಹಿಂದೂ ಶಬ್ಧ ಮಾನವ ನಿರ್ಮಿತವಾದರೆ, ಇಂದೂ ಶಬ್ಧ ದೈವ ನಿರ್ಮಿತವಾದದ್ದು. ಹಿಂದೂ ಎನ್ನುವ ಮಾತು ಕೇವಲ ಒಂದು ಮತಕ್ಕೆ ಮಾತ್ರ

ಸಂಬಂಧಿಸಿರುವುದಾದರೆ, ಇಂದೂ ಎನ್ನುವ ಮಾತು ಎಲ್ಲ ಮತಗಳಿಗು ಸಂಬಂಧಿಸಿರುವುದಾಗಿ ಇದೆ. ಹಿಂದೂ ಒಂದು ಮತದಲ್ಲಿಯೆ ಇರುತ್ತಾನೆ. ಆದರೆ ಇಂದೂ (ಜ್ಞಾನಿ) ಎಲ್ಲ ಮತಗಳಲ್ಲಿಯು ಇರುತ್ತಾನೆ. ಹಿಂದೂ ಎನ್ನುವ ಮಾತು ಆ ಒಂದು ಮತಸ್ಥನಿಗೆ ಅನ್ವಯಿಸುತ್ತದೆ. ಆದರೆ ಇಂದೂ ಎನ್ನುವ ಮಾತು ಯಾವ ಒಂದು ಮತದವರಿಗು ಸಂಬಂಧಿಸಿರುವುದಲ್ಲದೆ ಎಲ್ಲ ಮತಗಳಲ್ಲಿನ ಜ್ಞಾನಿಗಳಿಗೂ ಅನ್ವಯಿಸುತ್ತದೆ. ಈಗ ನಾವು ಜ್ಞಾನಿಗಳಾದರೆ ಇಂದೂಗಳೆ ಆಗುತ್ತೇವೆ. ಇಂದೂ ಆದ ಪ್ರತಿಯೊಬ್ಬನು ಇಂದೂತ್ವವನ್ನು ಕಾಪಾಡುತ್ತೇವೆ ಎಂಬ ಉದ್ದೇಶದಿಂದ ಇರಬೇಕು.

ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗವೆಂಬ ಅಧ್ಯಾಯದಲ್ಲಿ ನಾಲ್ಕನೇ(4) ಶ್ಲೋಕದಲ್ಲಿ ಭಗವಂತನು ಹೀಗೆ ಹೇಳಿದ್ದಾನೆ. **“ಮನುಷ್ಯರಲ್ಲಾಗಲಿ ಇಲ್ಲವೆ ಇತರೆ ಜೀವರಾಶಿಗಳಲ್ಲಾಗಲಿ ಯಾವ ತಾಯಿ ಗರ್ಭದಲ್ಲಿ ಹುಟ್ಟಿದವರಿಗಾಗಲಿ ತಾಯಿ ಪ್ರಕೃತಿಯಾದರೆ, ತಂದೆ ನಾನೇಯೆಂದು ತಿಳಿಯಬೇಕು.”** ಈ ಮಾತನ್ನು ಅನುಸರಿಸಿ ನೋಡಿದರೆ ಯಾರು ಯಾವ ತಾಯಿಗರ್ಭದಿಂದ ಹುಟ್ಟಿದರೂ ಅವನಿಗೆ ಬೀಜದಾತ ದೇವರೆ ಆಗುತ್ತಾನೆ. ಅದರಿಂದ ಭೂಮಿ ಮೇಲೆ ಹುಟ್ಟಿದ ಪ್ರತಿ ಮನುಷ್ಯನಿಗು ತಾಯಿ ಪ್ರಕೃತಿಯೆಂದು, ತಂದೆ ಪರಮಾತ್ಮನೆಂದು ತಿಳಿದು ಹೋಗುತ್ತದೆ. ಈ ಮಾತು ಮನುಷ್ಯನಾಗಿ ಹುಟ್ಟಿದ ಯಾರಿಗಾದರೂ ಅನ್ವಯಿಸುವುದು. ಆದ್ದರಿಂದ ಈದಿನ ಯಾವ ಮತದಲ್ಲಿರುವವನಿಗಾದರೂ ಈ ಮಾತು ಅನ್ವಯಿಸುತ್ತದೆ. ಕ್ರೈಸ್ತನಿಗಾಗಲಿ, ಮುಸ್ಲಿಮ್‌ಗಾಗಲಿ ತಂದೆ ಒಬ್ಬನೇ ದೇವರೆಂದು ತಿಳಿಯುತ್ತಿದೆ. ಸರ್ವಮಾನವರು ದೇವರ ಸಂತತಿ ಆಗಿರುವಾಗ ಯಾವ ಮನುಷ್ಯ ಯಾವ ಮತದಲ್ಲಿದ್ದರೂ ಅವನು ದೇವರಿಗೆ ಮಗನೇ ಆಗುತ್ತಾನೆ. ಇಲ್ಲಿ ಒಂದು ಉದಾಹರಣೆಯನ್ನು ಹೇಳಿಕೊಳ್ಳೋಣ. ಬದ್ರಿನಾಥ್ ಎನ್ನುವ ತಂದೆಗೆ ನಾಲ್ವರು ಗಂಡು ಮಕ್ಕಳಿದ್ದಾರೆಂದುಕೊಳ್ಳೋಣ. ನಾಲ್ವರು ಚೆನ್ನಾಗಿ ಓದಿಕೊಂಡು ಒಳ್ಳೆಯ ಉದ್ಯೋಗಗಳಿಗೆ ಹೋಗಿದ್ದಾರೆ. ಒಬ್ಬನು ಜಿಲ್ಲಾ ಕಲೆಕ್ಟರ್ ಕೆಲಸವನ್ನು ಮಾಡುತ್ತಿದ್ದಾನೆ. ಎರಡನೆಯವನು ಪೋಲೀಸ್

ಶಾಖೆಯಲ್ಲಿ ಜಿಲ್ಲಾ ಅಧಿಖಾರಿಯಾದ ಯಸ್.ಪಿ.ಯಂತೆ ಕೆಲಸ ಮಾಡುತ್ತಿದ್ದಾನೆ. ಮೂರನೆಯವನು ಅಮೆರಿಕಾದಲ್ಲಿ ಇಂಜಿನೀರಿಂಗ್ ಕೆಲಸ ಮಾಡುತ್ತಿದ್ದಾನೆ. ನಾಲ್ಕನೆಯವನು ರಾಜಕೀಯಕ್ಕೆ ಹೋಗಿ ರಾಷ್ಟ್ರದಲ್ಲಿ ಮಂತ್ರಿಯಾಗಿದ್ದಾನೆ. ಕಲೆಕ್ಟರಾಗಿರುವ ದೊಡ್ಡ ಕುಮಾರನ ಹೆಸರು ಎಮ್. ಅಮರ್‌ನಾಥ್, ಯಸ್.ಪಿ.ಯಾಗಿರುವ ಎರಡನೆ ಕುಮಾರನ ಹೆಸರು ಎಮ್. ಕಮಲನಾಥ್, ಅಮೆರಿಕಾದಲ್ಲಿ ಇಂಜಿನಿಯರಾಗಿರುವ ಮೂರನೆ ಕುಮಾರನ ಹೆಸರು ಎಮ್. ವಿಮಲನಾಥ್, ರಾಷ್ಟ್ರಮಂತ್ರಿಯಾಗಿರುವ ನಾಲ್ಕನೇ ಕುಮಾರನ ಹೆಸರು ಎಮ್. ಪ್ರೇಮ್‌ನಾಥ್. ಈಗ ಇವರ ಹೆಸರುಗಳನ್ನು, ಕೆಲಸಗಳನ್ನು ಪರಿಶೀಲಿಸಿದರೆ ಬೇರೆಬೇರೆ ಹೆಸರುಗಳು, ಬೇರೆಬೇರೆ ಊರುಗಳು, ಬೇರೆಬೇರೆ ಉದ್ಯೋಗ ಗಳಾಗಿವೆ. ಈ ನಾಲ್ವರನ್ನು ನೋಡಿದವನು ಒಬ್ಬ ತಂದೆಯ ಕುಮಾರರೆಂದು ಗುರುತಿಸುವುದಕ್ಕೆ ಅವಕಾಶವಿಲ್ಲ. ಆದರೆ ಇವರ ಹೆಸರುಗಳನ್ನು ಕ್ರಮವಾಗಿ ನಾವು ಪರಿಶೀಲಿಸಿ ನೋಡೋಣ.

| | | |
|---|---|---|
| **1) ಮೂಡುಗುಂಡ್ಲ** | **ಅಮರನಾಥ್ (ಕಲೆಕ್ಟರ್)** | **ಅಕಾರಾಬಾದ್** |
| **2) ಮೂಡುಗುಂಡ್ಲ** | **ಕಮಲನಾಥ್ (ಯಸ್.ಪಿ)** | **ವಿಕಾರಾಬಾದ್** |
| **3) ಮೂಡುಗುಂಡ್ಲ** | **ವಿಮಲನಾಥ್ (ಇಂಜಿನಿಯರ್)** | **ಅಮೆರಿಕಾ** |
| **4) ಮೂಡುಗುಂಡ್ಲ** | **ಪ್ರೇಮ್‌ನಾಥ್ (ಮಿನಿಸ್ಟರ್)** | **ಅದರಾಬಾದ್** |

ನಾಲ್ವರು ಕುಮಾರರ ಹೆಸರುಗಳನ್ನು ಪರಿಶೀಲಿಸಿದರೆ ಒಂದು ಮನೆ ಹೆಸರು ಅಥವಾ ವಂಶದ ಹೆಸರು, ಎರಡನೆಯದು ಮನುಷ್ಯನ ಹೆಸರು, ಮೂರು ಆತನ ಉದ್ಯೋಗ, ನಾಲ್ಕು ಆತನು ನಿವಾಸವಿರುವ ಊರು ಎಂದು ನಾಲ್ಕು ಭಾಗಗಳಾಗಿವೆ. ಅದರಲ್ಲಿ ಮನುಷ್ಯನ ಹೆಸರು, ಉದ್ಯೋಗದ ಹೆಸರು, ಊರಿನ ಹೆಸರುಗಳು ನಾಲ್ಕು ಜನರದು ಬೇರೆಬೇರೆಯಾಗಿ ಇದ್ದರೂ ಮೊದಲು ಮನೆ ಹೆಸರು ಮಾತ್ರ ಒಂದೆ ಇದೆ. ನಾಲ್ವರು ಬೇರೆಬೇರೆ ಉದ್ಯೋಗಗಳನ್ನು ಮಾಡುತ್ತಾ, ಬೇರೆಬೇರೆ ಸ್ಥಾನಗಳಲ್ಲಿ, ಬೇರೆಬೇರೆ ಹೆಸರುಗಳಿದ್ದು, ಬೇರೆಬೇರೆ ಊರುಗಳಲ್ಲಿದ್ದರೂ, ಎಲ್ಲರಿಗೂ ಒಂದೇ ಮನೆಯ ಹೆಸರಿರುವುದರಿಂದ ನೀವು

ನಾಲ್ವರು ಒಂದೇ ವಂಶದವರೆಂದು ಸುಲಭವಾಗಿ ಗುರುತಿಸಬಹುದು. ಹೆಸರಿಗೆ ಮುಂದಿರುವ ಒಂದೇ ಒಂದು ಮನೆ ಹೆಸರಿನಿಂದ ಅದು ಸಾಧ್ಯವಾಗುತ್ತಿದೆ. ಮನುಷ್ಯ ಹುಟ್ಟಿದ ನಂತರ ಕೆಲವು ದಿನಗಳಿಗೆ ಹೆಸರು ಇಡಲಾಗುತ್ತದೆ. ದೊಡ್ಡವನಾದ ನಂತರ ಬಂದಿರುವ ಉದ್ಯೋಗವನ್ನು ಹೆಸರಿನ ಪಕ್ಕದಲ್ಲಿ ಬರೆಯಲಾಗುತ್ತದೆ. ಉದ್ಯೋಗದ ನಂತರ ಆತನು ನಿವಾಸಿಸುವ ಊರಿನ ಹೆಸರು ಬರೆಯಲಾಗುತ್ತದೆ. ಉದ್ಯೋಗವಾಗಲಿ, ಊರಾಗಲಿ ಹೆಸರಿನ ನಂತರ ಬಂದಿರುವವೆಯೆಂದು, ಆದ್ದರಿಂದ ಅವುಗಳನ್ನು ಹೆಸರಿನ ನಂತರ ಇಡುತ್ತಾರೆಂದು ತಿಳಿಯುತ್ತಿದೆ. ಆದರೆ ಹೆಸರಿಗಿಂತ ಮೊದಲು ಮನೆಯ ಹೆಸರು ಇದೆ. ಮನೆಯ ಹೆಸರಿನ ನಂತರ ಹೆಸರು ಬರೆಯಲಾಗುತ್ತದೆ. ಇದನ್ನು ಅನುಸರಿಸಿ ನೋಡಿದಾಗ ಹೆಸರು ಇಡದ ಮೊದಲೆ ಇಂತಹ ವಂಶಸ್ಥನೆಂದು ನಿರ್ಣಯಿಸಲ್ಪಟ್ಟಿರುವಂತೆ ತಿಳಿಯುತ್ತಿದೆ.

ಇದೆಲ್ಲವೂ ಹೊರಗಿನ ಪ್ರಪಂಚದಲ್ಲಿನ ಹಿಂದೂಮತಸ್ಥನಾದ ಬದ್ರಿನಾಥ್‌ಗೆ ಹುಟ್ಟಿದಾಗ ನಡೆದ ತತಂಗ. ಭಗವದ್ಗೀತೆಯಲ್ಲಿ ಯಾರು ಯಾವ ತಂದೆಗೆ ಹುಟ್ಟಿದರೂ, ಯಾವ ತಾಯಿಗೆ ಹುಟ್ಟಿದರೂ, ಅವನು ನನ್ನ ಮಗನೆಯೆಂದು ದೇವರು ಹೇಳಿರುವುದು ನಡೆದಿದೆ. ಪ್ರಪಂಚದಲ್ಲಿ ಕಾಣಿಸುವ ಬದ್ರಿನಾಥ್‌ಗೆ ಹುಟ್ಟಿದಾಗ ಆ ತಂದೆಗೆ ಗುರುತಿಗಾಗಿ ವಂಶದ ಹೆಸರು ಬಂದಿತು. ಆದರೆ ಇಲ್ಲಿ ಸರ್ವರಿಗು ತಂದೆಯಾದ ಕಾಣಿಸದ ದೇವರಿಗೆ ಹುಟ್ಟಿದವರಿಗೆ ಗುರುತು ಏನು? ಎಂಬ ಪ್ರಶ್ನೆ ಬಾರದೆ ತಪ್ಪುವುದಿಲ್ಲ. ಅಂತಹ ಪ್ರಶ್ನೆ ಬಂದಾಗ ಉತ್ತರವನ್ನು ಹುಡುಕಿದರೆ ಹೀಗಿದೆ. ಕಾಣಿಸುವ ತಂದೆ ಇಂಥವನೇ ಎಂಬ ಗುರುತಿಗೆ ವಂಶದ ಹೆಸರು ಇರುವಂತೆ, ಕಾಣಿಸದ ತಂದೆ ದೇವರೆಯೆಂದು ಹೇಳುವುದಕ್ಕೆ ದೇವರ ಧರ್ಮದ ಹೆಸರು ಪ್ರತಿ ಮನುಷ್ಯನಿಗೆ ಇರುತ್ತದೆ. ಆದರೆ ದೇವರು ಯಾರೊ, ದೇವರ ಧರ್ಮ ಯಾವುದೋ ತಿಳಿಯದ ಮನುಷ್ಯ, ತಾನು ದೇವರ ಸಂತತಿಯೆಂದು ತಿಳಿಯದ ಸ್ಥಿತಿಯಲ್ಲಿದ್ದು, ತಾನು ದೇವರ ಧರ್ಮಕ್ಕೆ ಸಂಬಂಧಿಸಿದ ಮನುಷ್ಯನೆಂದು ಹೇಳಿಕೊಳ್ಳಲಾಗದೆ ಹೋಗುತ್ತಿದ್ದಾನೆ.

ನಿಜಕ್ಕು ತಾನು ದೇವರ ಸಂತತಿಗೆ ಸೇರಿದವನೆಂದು ತಿಳಿಯದೆ, ಹೊರಗೆ ಕಾಣಿಸುವ ತಂದೆಯನ್ನೇ ನಿಜವಾದ ತಂದೆಯೆಂದುಕೊಂಡು ಆತನ ವಂಶದ ಹೆಸರನ್ನು ಹೇಳುತ್ತಿದ್ದಾರೆ. ಪೂರ್ವದಲ್ಲಿ ತಾವು ಮೊದಲು ದೇವರಿಗೆ ಸಂತತಿಯೆಂದು, ನಂತರ ಮನುಷ್ಯರ ಸಂತತಿಯೆಂದು ತಿಳಿಯುವಂತೆ ತಮ್ಮ ಹೆಸರಿನ ಮುಂದೆ ಇಂದೂಶ್ರೀ ಎಂದು ಮೂರಕ್ಷರಗಳನ್ನು ಇಡುತ್ತಿದ್ದರು. ಕಾಲಕ್ರಮೇಣ ಇಂದೂ ಹೋಗಿ ಶ್ರೀ ಒಂದು ಉಳಿದಿದೆ. ಈಗ ಅದು ಸಹ ಹೋಗಿದೆ. ಉದಾಹರಣೆಗೆ ಇಂದೂಶ್ರೀ ಮೂಡುಗುಂಡ್ಲ ಅಮರನಾಥ್ ಎಂದು ಪೂರ್ವದಲ್ಲಿದ್ದರೆ, ಸ್ವಲ್ಪಕಾಲಕ್ಕೆ ಶ್ರೀ ಮೂಡುಗುಂಡ್ಲ ಅಮರ್‌ನಾಥ್ ಆಗಿದೆ. ಈಗ ಎಲ್ಲಾದರು ಶ್ರೀಯನ್ನು ಮೊದಲು ಬರೆಯುವ ಅಭ್ಯಾಸವಿದ್ದರು ಎಲ್ಲಾಕಡೆ ಇಲ್ಲ. ಪೂರ್ವದಲ್ಲಿ ಇಂದೂಶ್ರೀ ಬದಲು ರಾಜಶ್ರೀ ಎಂದು ಸಹ ಬರೆಯುತ್ತಿದ್ದರು. ದೇವರ ವಿದ್ಯೆಯನ್ನು ರಾಜವಿದ್ಯೆ ಎಂದು ಕರೆಯುತ್ತಿದ್ದರು. ಆದ್ದರಿಂದ ಕೆಲವರು ರಾಜಶ್ರೀ ಎಂದು ಬರೆಯುತ್ತಿದ್ದರು. ರಾಜಶ್ರೀ ಎಂದರೂ, ಇಂದೂಶ್ರೀ ಎಂದರೂ ಒಂದೇ ಅರ್ಥವೆಂದು ತಿಳಿಯಬೇಕು.

ದ್ವಾಪರಯುಗದಲ್ಲಿ ಭಗವದ್ಗೀತೆಯನ್ನು ಕೃಷ್ಣನು ಹೇಳಿದಾಗಲೂ ಸಹ ಒಂದು ಇಂದೂಧರ್ಮವೆ ಇತ್ತು. ಆಗ ಕ್ರೈಸ್ತಮತವಾಗಲಿ, ಇಸ್ಲಾಮ್‌ಮತವಾಗಲಿ ಇಲ್ಲ. ಆ ಕಾಲದಲ್ಲಿ ಯಾವ ಇತರೆ ಮತಗಳು ಇಲ್ಲವಾದ್ದರಿಂದ ಹಿಂದೂ ಮತವು ಸಹ ಇಲ್ಲ. ಮತಗಳು ಇಲ್ಲದ ಆ ಕಾಲದಲ್ಲಿ ಇಂದೂಗಳು ತಮ್ಮ ಧರ್ಮವನ್ನು ಕುರಿತು ಇತರರಿಗೆ ಹೇಳುತ್ತಿದ್ದರು. ದ್ವಾಪರಯುಗದಲ್ಲಿ ಅಧರ್ಮಗಳು ಇರುವುದು ಹೆಚ್ಚಾಗಿ ಹೋಗಿ, ಧರ್ಮಗಳು ಕಡಿಮೆಯಾಗಿ ಹೋಗಿರುವುದರಿಂದ ದೇವರು ಭಗವಂತನಾಗಿ ಹುಟ್ಟಿ ಇಂದೂ ಧರ್ಮಗಳನ್ನು ಗೀತೆಯಲ್ಲಿ ಹೇಳಿ ಹೋಗಿದ್ದಾನೆ. ಆದರೂ ಅವು ಪ್ರಜೆಗಳೊಳಗೆ ಹೊಕ್ಕಲಿಲ್ಲ. ಆದ್ದರಿಂದ ಕಲಿಯುಗದಲ್ಲಿ ಧರ್ಮಗಳು ಪೂರ್ತಿಯಾಗಿ ತಳಸೇರಿ ಹೋಗಿ, ಅಧರ್ಮಗಳು ಹೆಚ್ಚಾಗಿ ಹೋಗಿವೆ. ಈಗ ಮಾಯ ಪ್ರಭಾವ ಮನುಷ್ಯರ ಮೇಲೆ ಚೆನ್ನಾಗಿ ಕೆಲಸ ಮಾಡುವುದರಿಂದ, ಜ್ಞಾನ ಪಥವನ್ನು ಬಿಟ್ಟು ಮನುಷ್ಯರು ಮಾಯೆ

ಮತವನ್ನು ಏರ್ಪಡಿಸಿಕೊಂಡಿದ್ದಾರೆ. ಕಾಲ ಕಳೆದಂತೆಲ್ಲಾ ಒಂದರ ನಂತರ ಒಂದು ಕೆಲವು ಮತಗಳು ತಯಾರಾಗಿವೆ. ಆ ವಿಧವಾಗಿ ಭೂಮಿಮೇಲೆ ಮತಗಳು ತಯಾರಾದಾಗ ಇಂದೂಗಳು ತಮ್ಮ ಗುರುತಿಗಾಗಿ, ತಮ್ಮದು ಸಹ ಇಂದೂಮತವೆಂದು ಹೇಳಿಕೊಳ್ಳುವುದಕ್ಕೆ ಪ್ರಾರಂಭಿಸಿದರು. ಆ ವಿಧವಾಗಿ ಸ್ವಲ್ಪಕಾಲಕ್ಕೆ ಇಂದೂಗಳು ತಮ್ಮದು ಧರ್ಮವೆಂದು ಮರೆತುಹೋಗಿ, ಎಲ್ಲರ ಮತಗಳ ಹಾಗೆ ತಮ್ಮದು ಸಹ ಒಂದು ಮತವೆಂದುಕೊಂಡಿದ್ದಾರೆ. ಮೊದಲಿನವರು ಸತ್ತುಹೋಗಿ, ಹೊಸದಾಗಿ ಹುಟ್ಟಿ ಬಂದವರು ತಮ್ಮ ವಿಧಾನ ತಿಳಿಯದವರು ಬರುವುದರಿಂದ, ಕಾಲಕ್ರಮೇಣ ಧರ್ಮ ಮತವಾಗಿ, ಇಂದೂ ಎಂಬ ಶಬ್ಧ ಹಿಂದೂ ಶಬ್ಧವಾಗಿ ಬದಲಾಗಿ ಹೋಗಿದೆ. ತಮ್ಮ ಗತ ಚರಿತ್ರೆ ತಿಳಿಯದ ಹಿಂದೂಗಳು ಈ ದಿನ ಎಲ್ಲ ಮತಗಳ ನಡುವೆ ತಮ್ಮದು ಒಂದು ಮತವೆಂದುಕೊಳ್ಳುತ್ತಿದ್ದಾರೆ.

ಯಾವ ಮತವಿಲ್ಲದ ದಿನದಲ್ಲಿ ಇಂದೂ ಧರ್ಮ ಸಂಸ್ಥಾಪನೆಗಾಗಿ ಹೇಳಲಾದ ಭಗವದ್ಗೀತೆ ಈದಿನ ಇಂದೂಧರ್ಮ ಗ್ರಂಥವಾಗಿ ಕಂಡುಬರಲಿಲ್ಲ. ಅದು ಕೂಡ ಒಂದು ಮತ ಗ್ರಂಥವಾಗಿ ಲೆಕ್ಕ ಹಾಕಲ್ಪಡುತ್ತಿದೆ. ಈದಿನ ಅಜ್ಞಾನದಲ್ಲಿ ಮುಳುಗಿ ಹೋದ ಹಿಂದೂಗಳು ಕೆಲವರು ಭಗವದ್ಗೀತೆಯನ್ನು ತಮ್ಮ ಗ್ರಂಥವಾಗಿ ಸಹ ಹೇಳಿಕೊಳ್ಳದೆ, ವೇದಗಳನ್ನು ತಮ್ಮ ಮತ ಪ್ರಮಾಣ ಗ್ರಂಥಗಳಾಗಿ ಹೇಳುತ್ತಿದ್ದಾರೆ. ಈ ವಿಧವಾಗಿ ಇಂದೂಧರ್ಮ ಇಂದೂಮತವಾಗಿ ಬದಲಾಗಿ, ಕೊನೆಗೆ ಹಿಂದೂ ಮತವಾಗಿ ಹೇಳಲ್ಪಡುತ್ತಿದೆ. ಒಂದೊಂದು ಮೆಟ್ಟಿಲಾಗಿ ಹೀನಸ್ಥಿತಿಗೆ ಇಳಿಜಾರಿದ ಹಿಂದೂಮತದಲ್ಲಿನ ಮನುಷ್ಯರಿಗೆ, ದೈವಜ್ಞಾನ ಪೂರ್ತಿಯಾಗಿ ತಿಳಿಯದಂತೆ ಹೋಗಿದೆ. ಅಂತಹ ಸ್ಥಿತಿಯಲ್ಲಿ ಉಳಿದ ಮತದವರು ನಮ್ಮ ಮತದಲ್ಲಿ ದೇವರ ಜ್ಞಾನ ಸಂಪೂರ್ಣವಾಗಿ ಇದೆಯೆಂದು ಕೆಲವರು, ನಮ್ಮ ಮತದಲ್ಲಿ ಸಂಪೂರ್ಣ ರಕ್ಷಣೆ ಇರುತ್ತದೆಂದು ಕೆಲವರು, ನಮ್ಮ ಮತಕ್ಕೆ ಬಂದರೆ ನಿಮ್ಮ ಪಾಪಗಳೆಲ್ಲ ಹೋಗುತ್ತವೆಂದು ಕೆಲವರು ಹೇಳುವುದರಿಂದ, ಹಿಂದೂ ಮತದವರು ಉಳಿದ ಮತಗಳಿಗೆ ತೆರಳಿಕೊಂಡು

ಹೋಗುವುದು ನಡೆಯುತ್ತಿದೆ. ಹಿಂದೂಗಳು ಇತರ ಮತಗಳೊಳಗೆ ಹೋಗುವುದರಿಂದ ಹಿಂದೂಮತ ಇಳಿಮುಖವಾಗಿ ಉಳಿದ ಮತಗಳು ಅಭಿವೃದ್ಧಿಯಾಗಿವೆ. ಹಿಂದೂಮತ ಕ್ಷೀಣಿಸಿ ಹೋಗುತ್ತಿದೆಯೆಂದು ಗ್ರಹಿಸಿದ ಕೆಲವರು ಹಿಂದೂಗಳು ತಮ್ಮ ಮತವನ್ನು ಕಾಪಾಡಿಕೊಳ್ಳಬೇಕೆಂದುಕೊಂಡರು. ಯಾವ ರೋಗಕ್ಕೆ ಯಾವ ಔಷಧ ಹಾಕಬೇಕೊ, ಎಷ್ಟು ಹಾಕಬೇಕೊ ತಿಳಿಯದ ವೈದರ ಹಾಗೆ ಕಾಳಿನ ಪ್ರಮಾಣದಲ್ಲಿ ಹಾಕಬೇಕಾದ ಔಷಧವನ್ನು ಗುಲಗಂಜಿ ಪ್ರಮಾಣದಲ್ಲಿ ಹಾಕಿ ರೋಗಿಯ ಪ್ರಾಣವನ್ನು ತೆಗೆದಂತೆ, ಮತರಕ್ಷಣೆ ಎಂದು ತಮ್ಮ ಮತದವರನ್ನೇ ಗುರುತಿಸಲಾಗದ ಕುರುಡರಾಗಿ ಹಿಂದೂಗಳು ಹಿಂದೂಗಳನ್ನೇ ಹಿಂಸಿಸುವುದನ್ನು ಪ್ರಾರಂಭಿಸಿದ್ದಾರೆ. ಅದರಿಂದ ಹಿಂದೂಮತ ಇನ್ನೂ ವೇಗವಾಗಿ ಕ್ಷೀಣಿಸುವುದಕ್ಕೆ ಅವಕಾಶ ಏರ್ಪಟ್ಟಿದೆ.

ಇಂತಹ ಕೊನೆಯ ಸ್ಥಿತಿಯಲ್ಲಿ ಇಂದೂಧರ್ಮ ಸಿದ್ಧಾಂತಕರ್ತನಾಗಿ ನಾವು ಬರುವುದು ನಡೆದಿದೆ. ಈಗ ಪೂರ್ತಿಯಾಗಿ ರೋಗಬಂದ ಹಿಂದೂಮತಕ್ಕೆ ತ್ರೈತ ಸಿದ್ಧಾಂತದಿಂದ ಚಿಕಿತ್ಸೆ ಮಾಡಿ, ಹಿಂದೂಮತವನ್ನು ಮತ್ತೆ ಇಂದೂಧರ್ಮವಾಗಿ ನೆಲೆಗೊಳಿಸಬೇಕಾದ ಜವಾಬ್ದಾರಿ ನಮ್ಮ ಮೇಲೆ ಇದೆ. ಈಗಿರುವ ಹಿಂದೂಗಳಿಗೆ ಪೂರ್ವದ ಚರಿತ್ರೆಯನ್ನು ತಿಳಿಸುವುದಕ್ಕೆ, ಇಂದೂಧರ್ಮವನ್ನು ಉದ್ಧರಿಸುವುದಕ್ಕೆ **"ಇಂದೂತ್ವವನ್ನು ಕಾಪಾಡೋಣ"** ಎನ್ನುವ ಈ ಗ್ರಂಥವನ್ನು ಬರೆಯಲಾಗಿದೆ. ಅಷ್ಟೇ ಅಲ್ಲದೆ ಇಂದೂಧರ್ಮಗಳನ್ನು ಈಗಿನ ಹಿಂದೂಗಳಿಗೆ ಪರಿಚಯ ಮಾಡುವುದಕ್ಕೆ, ಇಲ್ಲಿಗೆ ಸುಮಾರು ಐವತ್ತು(50) ಗ್ರಂಥಗಳನ್ನು ವಿವರವಾಗಿ, ಸಂಚಲನಾತ್ಮಕವಾಗಿ ತ್ರೈತ ಸಿದ್ಧಾಂತವನ್ನು ಉಪಯೋಗಿಸಿ ಬರೆಯುವುದು ನಡೆದಿದೆ. ಆ ದಿನ ಕೃಷ್ಣನು ಹೇಳಿದ ಭಾವಗಳನ್ನು ಸೇರಿಸಿ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯನ್ನು ಬರೆಯಲಾಗಿದೆ. ನಮ್ಮ ಗ್ರಂಥಗಳನ್ನು ಓದಿದ ಯಾವ ಮತಸ್ಥನಾದರೂ ನಾವು ಹೇಳಿದ ಜ್ಞಾನವನ್ನು ಅಲ್ಲಗಳೆಯನು. ಒಂದು ವೇಳೆ ಯಾರಾದರೂ ಹೊರಗಡೆ ಒಪ್ಪಿಕೊಳ್ಳದೇ ಹೋದರೂ, ಅವನ ಅಂತರಂಗದಲ್ಲಿ ಮಾತ್ರ ಖಂಡಿತ ಒಪ್ಪಿಕೊಳ್ಳುತ್ತಾನೆ. ಇಲ್ಲಿಯವರೆಗು ನನ್ನ

ಗ್ರಂಥಗಳು ಒಂದು ಹಿಂದೂಮತದವರನ್ನೇ ಅಲ್ಲದೆ ಒಟ್ಟು ಎಲ್ಲ ಮತದವರನ್ನು ಆಕರ್ಷಿಸಿವೆ. ಏಕೆಂದರೆ! ನಾನು ಹೇಳಿದ ಇಂದೂಧರ್ಮ ಎಲ್ಲ ಮತಗಳಿಗು ಸಂಬಂಧಿಸಿದೆ. ಆದ್ದರಿಂದ ನನ್ನ ಬೋಧನೆ ಎಲ್ಲರನ್ನು, ಎಲ್ಲ ಮತದವರನ್ನು ಒಂದು ದಾರಿಗೆ ತಂದಿದೆ. ದುರದೃಷ್ಟವಶಾತ್ತು ಹಿಂದೂ ಮತದಲ್ಲಿನ ದೊಡ್ಡಸ್ತಿಕೆ ಚಲಾಯಿಸುವವರು ನನ್ನ ತ್ರೈತಸಿದ್ಧಾಂತವನ್ನು ಕ್ರೈಸ್ತಮತದಲ್ಲಿನ ತ್ರಿತ್ವವಾಗಿ ಪ್ರಚಾರ ಮಾಡಿ ಸ್ವಲ್ಪ ಜನರನ್ನು ನನ್ನ ಕಡೆ ಬಾರದಂತೆ, ನನ್ನ ಬೋಧನೆಗಳು ತಿಳಿಯದಂತೆ ಮಾಡುತ್ತಿದ್ದಾರೆ. "ಅಮ್ಮಾ ಇಡುವುದಿಲ್ಲ ಕೇಳಿಕೊಂಡು ತಿನ್ನಲು ಬಿಡುವುದಿಲ್ಲ" ಎನ್ನುವ ಗಾದೆಯ ಪ್ರಕಾರ ಹಿಂದೂಮತದಲ್ಲಿನ ದೊಡ್ಡಸ್ತಿಕೆ ಚಲಾಯಿಸುವವರಿಗೆ ಧರ್ಮಗಳನ್ನು ತಿಳಿಸುವ ಸಾಮರ್ಥ್ಯಇಲ್ಲ. ಪಕ್ಕದಲ್ಲಿ ಎಲ್ಲಿಯೂ ತಿಳಿದುಕೊಳ್ಳಲು ಬಿಡುವುದಿಲ್ಲ. ಅದರಿಂದ ಇಂದೂಧರ್ಮ ಸಿದ್ಧಾಂತಕರ್ತನಾದ ನನಗೂ, ಹಿಂದೂಗಳಿಗು ನಡುವೆ ಹಿಂದೂಮತ ರಕ್ಷಕರೆನ್ನುವವರು ಅಗಾಧವನ್ನು ಕಲ್ಪಿಸುತ್ತಿದ್ದಾರೆ.

ಕಲಿಯುಗದಲ್ಲಿ ಹಿಂದೂಮತವಾಗಿ ಬದಲಾದ ಧರ್ಮವನ್ನು ಪುನಃ ಇಂದೂಧರ್ಮವಾಗಿ ನೆಲೆಗೊಳಿಸಬೇಕೆಂದರೆ ಅಷ್ಟು ಸುಲಭವಾದ ಕೆಲಸವಲ್ಲ. ಎಷ್ಟೋ ಕಷ್ಟದಿಂದ ಕೂಡಿಕೊಂಡ ಕೆಲಸವಾಗುತ್ತದೆ. ಏಕೆಂದರೆ! ಕಲಿಯುಗದಲ್ಲಿ ನಮಗಿಂತ ಮೊದಲು ಬಂದ ಸಿದ್ಧಾಂತಕರ್ತರಾದ ಆದಿ ಶಂಕರಾಚಾರ್ಯರು, ರಾಮಾನುಜಾಚಾರ್ಯರು ಇಂದೂಧರ್ಮವನ್ನು ಬೋಧಿಸುವ ಪ್ರಯತ್ನದಲ್ಲಿ ಶಂಕರಾಚಾರ್ಯರು ಶೈವವನ್ನು, ರಾಮಾನುಜಾಚಾರ್ಯರು ವೈಷ್ಣವವನ್ನು ಬೋಧಿಸಿದ್ದಾರೆ. ಆದಿನ ಅದ್ವೈತ ಸಿದ್ಧಾಂತಕರ್ತನಾದ ಶಂಕರಾಚಾರ್ಯರು ಅದ್ವೈತ ಸಿದ್ಧಾಂತದಿಂದ ಶೈವವನ್ನು ಬೋಧಿಸಿದರೆ, ವಿಶಿಷ್ಟಾದ್ವೈತ ಸಿದ್ಧಾಂತದಿಂದ ರಾಮಾನುಜಾಚಾರ್ಯರು ವೈಷ್ಣವವನ್ನು ಬೋಧಿಸಿದ್ದಾನೆ. ಆ ದಿನ ಶಂಕರಾಚಾರ್ಯರು ಬೋಧಿಸಿದ ಶೈವಕ್ಕೆ ಸಂಬಂಧಿಸಿದ ಮೂರು ವಿಭೂತಿ ರೇಖೆಗಳಲ್ಲಿ ಇಂದೂಧರ್ಮ ಒಳಗೊಂಡಿದ್ದರೂ, ಅದನ್ನು ಪೂರ್ತಿ ಹೊರಗಡೆ ಹೇಳದೆ ಚಿಕ್ಕ ವಯಸ್ಸಿನಲ್ಲಿಯೆ 32 ವರ್ಷಗಳಿಗೆ ಶಂಕರಾಚಾರ್ಯನು

ಮರಣಿಸಿದನು. ನಂತರ ಸ್ವಲ್ಪಕಾಲಕ್ಕೆ ಸುಮಾರು ಎರಡು ನೂರು ವರ್ಷಗಳಿಗೆ ವಿಶಿಷ್ಟಾದ್ವೈತ ಸಿದ್ಧಾಂತ ಕರ್ತನಾಗಿ ರಾಮಾನುಜಾಚಾರ್ಯರು ಬಂದು 120 ವರ್ಷಗಳು ಬದುಕಿ, ತ್ರಿ ನಾಮಕ್ಕೆ ಸಂಬಂಧಿಸಿದ ವೈಷ್ಣವವನ್ನು ಬೋಧಿಸಿದನು. ರಾಮಾನುಜಾಚಾರ್ಯನು ಧರಿಸಿದ ವೈಷ್ಣವಕ್ಕೆ ಸಂಬಂಧಿಸಿದ ಮೂರು ನಾಮಗಳಲ್ಲಿ ಇಂದೂಧರ್ಮ ಒಳಗೊಂಡಿದ್ದರೂ, ಆ ದಿನಗಳಲ್ಲಿ ಬಲವಾಗಿದ್ದ ಶೈವರು ಆ ವಿಷಯ ತಿಳಿಯದೆ ವೈಷ್ಣವವನ್ನು ಪ್ರಚಾರವಾಗದಂತೆ ಮಾಡಿದರು. ರಾಮಾನುಜಾಚಾರ್ಯರು ತಮ್ಮ ಆಚಾರ್ಯನಾದ ಶಂಕರಾಚಾರ್ಯರಿಗೆ ಪೋಟಿಯಾಗಿ ಬಂದಿದ್ದಾನೆಂದು ಅಂದುಕೊಂಡರು. ಎರಡು ನೂರು ವರ್ಷಗಳಿಂದ ಶೈವರಾಗಿ ಬದಲಾದ ಎಷ್ಟೋ ಜನರು ಆಗತಾನೆ ಹುಟ್ಟಿದ ವೈಷ್ಣವವನ್ನು ಅಡಗಿಸಬೇಕೆಂದುಕೊಂಡರು. ಆದ್ದರಿಂದ ರಾಮಾನುಜಾಚಾರ್ಯರು ರಹಸ್ಯ ಜೀವನ ಮಾಡಬೇಕಾಗಿ ಬಂದಿತು. ಆ ಕಾಲದಲ್ಲಿ ಶೈವರಿಗು, ವೈಷ್ಣವರಿಗು ಎಷ್ಟೋ ಘರ್ಷಣೆಗಳು ನಡೆದಿವೆ. ಶೈವರು ವೈಷ್ಣವರ ಮೇಲೆ ಧಾಳಿ ಮಾಡಿ ಹಿಂಸಿಸಿದರು. ಬಲವಂತವಾಗಿ ವೈಷ್ಣವರನ್ನು ಶೈವರಾಗಿ ಬದಲಾಯಿಸಲು ನೋಡಿದರು. ಈ ಮಧ್ಯೆಕಾಲದಲ್ಲಿ ಬಂದ "ದಶಾವತಾರ" ಎನ್ನುವ ಚಲನಚಿತ್ರ ನೋಡಿದರೆ ನಾವು ತಿಳಿಸಿದಂತೆ ಅದರಲ್ಲಿ ಶೈವರಿಗು, ವೈಷ್ಣವರಿಗು ನಡೆದ ಶತ್ರುತ್ವ ಕಾಣಿಸುತ್ತದೆ.

ಪೂರ್ವದಲ್ಲಿ ಇಂದೂಧರ್ಮ ಸಿದ್ಧಾಂತಕರ್ತರಾಗಿ ಶಂಕರಾಚಾರ್ಯರು, ರಾಮಾನುಜಾಚಾರ್ಯರು ಬಂದರೂ, ಶೈವರಲ್ಲಿನ ಅವಗಾಹನೆ ಲೋಪದಿಂದ ವೈಷ್ಣವರಲ್ಲಿನ ಧರ್ಮ ತಿಳಿಯದಂತೆ ಹೋಗಿದೆ. ಹಾಗೇ ಶಂಕರಾಚಾರ್ಯರು ಚಿಕ್ಕ ವಯಸ್ಸಿನಲ್ಲಿಯೆ ಮರಣಿಸಿರುವುದರಿಂದ ಶೈವರಲ್ಲಿನ ಧರ್ಮ ಹೊರಗಡೆ ತಿಳಿಯದಂತೆ ಹೋಯಿತು. ಅಂತಹ ಪರಿಸ್ಥಿತಿಯಲ್ಲಿ ಕ್ರೈಸ್ತಮತ, ಇಸ್ಲಾಮ್ ಮತ ಎರಡೂ ಹುಟ್ಟಿ ಅಭಿವೃದ್ಧಿಯಾಗತೊಡಗಿದವು. ಇಂದೂಧರ್ಮ ಹಿಂದೂ ಮತವಾಗಿ ಬದಲಾಗಿ, ಕೊನೆಗೆ ಹಿಂದೂ ಮತವು ಸಹ ಇಲ್ಲದಂತೆ ಹೋಗುವ ಪರಿಸ್ಥಿತಿ ಏರ್ಪಟ್ಟಿದೆ. ರಾಮಾನುಜಾಚಾರ್ಯರ

ನಂತರ ಸುಮಾರು 900 ವರ್ಷಗಳಿಗೆ **ತ್ರೈತಸಿದ್ಧಾಂತ ಕರ್ತನಾಗಿ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು** ಎನ್ನುವ ಹೆಸರಿನಿಂದ ನಾವು ಬರುವುದು ನಡೆದಿದೆ. ಯಾರಿಗೆ ತಿಳಿದರೂ, ತಿಳಿಯದೇ ಹೋದರೂ ಕ್ಷೀಣಿಸಿಹೋದ ಇಂದೂ ಧರ್ಮವನ್ನು ಮತ್ತೆ ನೆಲೆಗೊಳಿಸಬೇಕಾದ ಜವಾಬ್ದಾರಿ ಸಿದ್ಧಾಂತಕರ್ತನಾದ ನಮ್ಮ ಮೇಲೆ ಪೂರ್ತಿಯಾಗಿ ಇದೆ. ಆದರೆ ಶೈವರು ಅವಗಾಹನೆ ಲೋಪದಿಂದ ವೈಷ್ಣವರನ್ನು ಹಿಂಸಿಸಿದಂತೆ, ಈದಿನ ಹಿಂದೂಗಳೆನ್ನುವವರಲ್ಲಿ ಕೆಲವರಿಗೆ ಪೂರ್ತಿಯಾಗಿ ಅವಗಾಹನೆ ಲೋಪವೇ ರ್ಪಟ್ಟು, ತ್ರೈತಸಿದ್ಧಾಂತ ಕರ್ತನಾದ ನಮ್ಮನ್ನು ದ್ವೇಷಿಸಲು ಪ್ರಾರಂಭಿಸಿದ್ದಾರೆ. ಆ ನೇತೃತ್ವದಲ್ಲಿ ನಮ್ಮ ಶಿಷ್ಯರನ್ನು ಬಹಳ ಕಷ್ಟದ ಪಾಲು ಮಾಡಿದ್ದಾರೆ. ಇಂತಹ ದ್ವೇಷಗಳಿಂದ ಹಿಂದೂಗಳಿಗೆ ನಷ್ಟ, ಇತರೆ ಮತದವರಿಗೆ ಲಾಭ ಆಗುತ್ತದೆ. ಆದ್ದರಿಂದ ನಾವು ಎಷ್ಟೋ ತಿಳುವಳಿಕೆಯಿಂದ ವ್ಯವಹರಿಸಬೇಕಾಗಿದೆ. ರೋಗ ಬಂದವನಿಗೆ ವೈದ್ಯ ಮಾಡಿದಂತೆ ಹಿಂದೂಗಳಿಗೆ ಯೋಗ್ಯವಾದ ಜ್ಞಾನವೆಂಬ ಔಷಧವನ್ನು ಕೊಟ್ಟು ಅಜ್ಞಾನವೆಂಬ ರೋಗವನ್ನು ಇಲ್ಲದಂತೆ ಮಾಡಬೇಕು.

ವೈದ್ಯದಲ್ಲಿ ಕುಲ, ಮತ ಭೇದವಾಗಲಿ, ಬಡವ, ಧನಿಕ ಎನ್ನುವ ವಿವಕ್ಷವಾಗಲಿ ಏನೂ ಇರುವುದಿಲ್ಲ. ಕಾಲರಾ ಎನ್ನುವುದು ಒಂದು ರೋಗ. ಅದು ಭೂಮಿ ಮೇಲೆ ಮನುಷ್ಯರೆಲ್ಲರನ್ನು ಒಂದಾಗಿಯೆ ಲೆಕ್ಕಹಾಕಿ ಯಾವ ಮತಸ್ಥನಿಗಾಗಲಿ, ಯಾವ ಕುಲಸ್ಥನಿಗಾಗಲಿ ಬರಬಹುದು. ಕಾಲರಾ ರೋಗ ಒಬ್ಬ ಹಿಂದೂವನ್ನು ಸಾಯಿಸಿದಂತೆ, ಮುಸ್ಲಿಮ್‌ನನ್ನು ಸಹ ಸಾಯಿಸುತ್ತದೆ. ಮುಸ್ಲಿಮ್‌ನನ್ನು ಹಿಂಸಿಸಿದಂತೆ ಕ್ರೈಸ್ತನನ್ನು ಹಿಂಸಿಸಬಲ್ಲದು. ಮನುಷ್ಯರಲ್ಲಿ ಮತ ಭೇದಗಳಿರಬಹುದಾಗಲಿ, ರೋಗಕ್ಕೆ ಮತ ಭೇದಗಳು ಇರುವುದಿಲ್ಲ. ಹಾಗೆ ವೈದ್ಯಕ್ಕೂ ಸಹ ಮನುಷ್ಯರಲ್ಲಿನ ಮತಗಳ ತಾರತಮ್ಯಗಳು ತಿಳಿದಿಲ್ಲ. ಒಂದು ಔಷಧ ಒಬ್ಬ ಕ್ರೈಸ್ತನಿಗೆ ಹೇಗೆ ಕೆಲಸ ಮಾಡುತ್ತದೊ, ಹಾಗೆ ಮುಸ್ಲಿಮ್‌ಗು ಸಹ ಕೆಲಸ ಮಾಡುತ್ತದೆ. ಮತ ಎನ್ನುವ ರೋಗ ಕ್ರೈಸ್ತರಲ್ಲಿಯು, ಮುಸ್ಲಿಮ್‌ರಲ್ಲಿಯೂ, ಹಿಂದೂಗಳಲ್ಲಿಯೂ ವ್ಯಾಪಿಸಿದೆ. ಮೂರು ವರ್ಗದವರು

ತಮ್ಮ ತಮ್ಮ ಮತವನ್ನು ಬೆಳೆಸಿಕೊಳ್ಳಬೇಕೆಂದು ನೋಡುತ್ತಿದ್ದಾರೆ. ಮನುಷ್ಯರಲ್ಲಿ ದೇವರು, ದೇವರ ಜ್ಞಾನವೆನ್ನುವದು ಹೋಗಿ, ಮತ, ಮತ ಸಾಂಪ್ರದಾಯಗಳು ಎನ್ನುವವು ಬೆಳೆದುಹೋಗಿವೆ. ಮತ ಎನ್ನುವ ಪೈತ್ಯರೋಗದಿಂದ ಮನುಷ್ಯ ಮತಿ ಕೆಟ್ಟವನಾಗಿ, ದೇವರ ಜ್ಞಾನವನ್ನು ಮರೆತುಹೋಗಿ, ಮತ ಪೈತ್ಯದಿಂದ ಇಷ್ಟಬಂದಂತೆ ಮಾತನಾಡುತ್ತಿದ್ದಾನೆ. ಮತ ಪೈತ್ಯ ಹೋಗುವುದಕ್ಕೆ ಧರ್ಮ ಎನ್ನುವ ನಿಂಬೆರಸವನ್ನು ಬಳಸಬೇಕಾಗಿರುತ್ತದೆ.

ದೇವರು ಮನುಷ್ಯರಲ್ಲಿನ ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ, ಧರ್ಮಗಳನ್ನು ತಿಳಿಸುವುದಕ್ಕೆ ದ್ವಾಪರಯುಗದಲ್ಲಿ ಬಂದು ಹೋದಂತೆ ತಿಳಿದಿದೆ. ಆಗ ಹೇಳಿರುವುದು ಭಾರತದೇಶದಲ್ಲಿನ ಹಿಂದಿಭಾಷೆಯಲ್ಲಿ, ಬರೆದಿರುವುದು ಸಂಸ್ಕೃತ ಭಾಷೆಯಲ್ಲಿ. ಸಂಸ್ಕೃತ ಭಾಷೆ, ಹಿಂದಿ ಭಾಷೆ ಎರಡೂ ದೇಶದಲ್ಲಿನ ಎಲ್ಲ ಪ್ರಾಂತಗಳಲ್ಲಿ ಇಲ್ಲ, ಎಲ್ಲರಿಗು ತಿಳಿದಿಲ್ಲ. ಆದ್ದರಿಂದ ಇಲ್ಲಿಯವರೆಗು ಭಗವದ್ಗೀತೆ ವಿಷಯವೆ ತಿಳಿಯದವರು ಭಾರತದೇಶದಲ್ಲಿ ಇದ್ದಾರೆ. ಐದು ಸಾವಿರ ವರ್ಷಗಳಾದರೂ ಭಾರತದೇಶದಲ್ಲಿ ಎಲ್ಲ ಪ್ರಾಂತಗಳ ಪ್ರಜೆಗಳಿಗೆ ಭಗವಂತನು ಹೇಳಿದ ಭಗವದ್ಗೀತೆ ತಿಳಿಯದಿರುವಾಗ, ಪ್ರಪಂಚದಲ್ಲಿನ ಉಳಿದ 294 ದೇಶಗಳಿಗೆ ದೇವರು ಹೇಳಿದ ಧರ್ಮ ಹೇಗೆ ತಿಳಿಯುತ್ತದೆ? ದೇವರು ಒಂದುಬಾರಿ ಭೂಮಿಮೇಲೆ ಧರ್ಮವನ್ನು ನೆಲೆಗೊಳಿಸಲು ತಾನು ಮೂರು ಬಾರಿ ಭಗವಂತನಾಗಿ ಬರುತ್ತಾನೆ. ಆಗಿರುವಾಗ ಎಲ್ಲ ಪ್ರಾಂತದವರಿಗು ಆತನೆ ಜ್ಞಾನವನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ದ್ವಾಪರಯುಗದಲ್ಲಿ ಕುರುಕ್ಷೇತ್ರದಲ್ಲಿ ಅರ್ಜುನನಿಗೆ ಹೇಳಿದ್ದಾನೆ ಹೊರತು, ಇತರೆ ಪ್ರಾಂತಗಳಲ್ಲಿ ಇತರರಿಗ್ಯಾರಿಗು ಹೇಳಲಿಲ್ಲ. ಹಾಗೆ ಭಗವಂತನ ಎರಡನೆ ಬಾರಿ ಬರುವಿಕೆಯಲ್ಲಿಯು ಸಹ ಒಂದು ದೇಶದಲ್ಲಿ ಸ್ವಲ್ಪ ಪ್ರಾಂತದಲ್ಲಿಯೇ ಹೇಳಿದಂತೆ ತಿಳಿಯುತ್ತಿದೆ. ಮೂರನೆ ಬಾರಿ ಬಂದರೂ ಹಾಗೆಯೇ ಇರುತ್ತದೆ. ಆಗಿರುವಾಗ ಎಲ್ಲ ಪ್ರಾಂತಗಳಿಗು ಧರ್ಮಗಳು ದೇವರ ದೂತರ ಮುಖಾಂತರ ತಿಳಿಯುತ್ತದೆ. ಭಗವಂತನು ತಿಳಿಸಿದ ಜ್ಞಾನವನ್ನು ಮನುಷ್ಯರಿಗಿಂತ ಅಧಿಕವಾಗಿ ಅರ್ಥಮಾಡಿಕೊಂಡ ಗ್ರಹಗಳು,

ಭೂತಗಳು ದೇವರ ಸಮಾಚಾರವನ್ನು ತಿಳಿಸುವ ದೇವರ ದೂತರಾಗಿ ಬದಲಾಗಿ, ಭೂಮಿಮೇಲೆ ಎಷ್ಟೋ ಪ್ರಾಂತಗಳಲ್ಲಿ ದೇವರ ಧರ್ಮಗಳನ್ನು ತಿಳಿಸುವರು. ಭಗವಂತನು ತಿಳಿಸಿದ ಧರ್ಮಗಳನ್ನೇ ದೂತರು ಸಹ ತಿಳಿಸುವರೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ದೇವರು ಎರಡುಬಾರಿ ಭೂಮಿಯ ಮೇಲೆ ತನ್ನ ಧರ್ಮಗಳನ್ನು ತಿಳಿಸಿ ಹೋದ ನಂತರ ಭೂತಗಳಾದ ಕೆಲವರು, ದೇವದೂತರಾಗಿ ದೇವರ ಸಮಾಚಾರವನ್ನು ಬಹಳ ಪ್ರಾಂತಗಳಿಗೆ ಯಾವುದೊ ಒಂದು ವಿಧವಾಗಿ ತಿಳಿಸಿದ್ದಾರೆ. ಆದರೆ ದೂತರೆಲ್ಲರು ಹೇಳಿದ ಸಮಾಚಾರ ಎಲ್ಲಾಕಡೆ ಗುರುತಿಗೆ ಬರಲಿಲ್ಲ. ಕೆಲವು ಪ್ರಾಂತಗಳಲ್ಲಿ ದೂತರು ಹೇಳಿದ ದೇವರ ಸಮಾಚಾರ ಚೆನ್ನಾಗಿ ಪ್ರಚಾರಕ್ಕೆ ಬಂದಿದೆ. ಅಂತವುಗಳಲ್ಲಿ ಮುಖ್ಯವಾಗಿ ಹೇಳಿಕೊಳ್ಳಬೇಕಾಗಿರುವುದು ಪವಿತ್ರ ಖುರಾನ್ ಸಮಾಚಾರ. ದೇವರ ದೂತನಾದ ಜಿಬ್ರಾಯಿಲ್ ದೇವರ ಸಮಾಚಾರವನ್ನು, ದೇವರ ಧರ್ಮವನ್ನು ಮುಹಮ್ಮದ್(ಸಂ) ಪ್ರವಕ್ತನಿಗೆ ತಿಳಿಸಿದ್ದಾನೆ. ಮುಹಮ್ಮದ್ ಪ್ರವಕ್ತರವರು ದೇವದೂತನಿಂದ ತಿಳಿದುಕೊಂಡ ಸಮಾಚಾರವನ್ನು ಪವಿತ್ರ ಖುರಾನ್ ಗ್ರಂಥವಾಗಿ ಬಹಿರ್ಗತ ಮಾಡಿದರು. ಆ ವಿಧವಾಗಿ ದೇಶದಲ್ಲಿನ ಕೆಲವು ಪ್ರಾಂತಗಳಿಗೆ ಪ್ರಾಂತೀಯ ಭಾಷೆಯಲ್ಲಿಯೇ ದೇವರ ಜ್ಞಾನ ತಿಳಿಯಿತು.

ದೇವರು ಜ್ಞಾನರೂಪದಲ್ಲಿ ಹೇಳಿದ ಧರ್ಮಗಳನ್ನು ದೇವರ ದೂತರು ಕೆಲವರು ಇತರ ಪ್ರಾಂತಗಳಿಗೆ ತಿಳಿಸಿದಾಗ, ಅಲ್ಲಿ ತಿಳಿದ ಮನುಷ್ಯರು ಬೋಧಕರಂತೆ ಕೆಲಸಮಾಡಿ ಇನ್ನೂ ಸ್ವಲ್ಪ ಜನರಿಗೆ ತಿಳಿಸಿದಾಗ, ದೇವರ ಜ್ಞಾನ ಹಂತ ಹಂತವಾಗಿ ಹರಡಿಕೊಂಡು ಕೊನೆಗೆ ಪ್ರಪಂಚವೆಲ್ಲಾ ತಿಳಿಯುತ್ತದೆ. ದೇವ ದೂತರು ಎಲ್ಲಿ ಹೇಳಿದರೂ, ಯಾವ ಭಾಷೆಯಲ್ಲಿ ಹೇಳಿದರೂ, ಅವು ದೇವರು ಹೇಳಿದ ಧರ್ಮಗಳೇ ಆಗಿರುತ್ತವೆ. ಆದರೆ ದೇವರ ಧರ್ಮಗಳನ್ನು ಕೇಳಿದ ಮನುಷ್ಯರು ಅವುಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ತಪ್ಪಾಗಿ ಅರ್ಥೈಸಿಕೊಳ್ಳುತ್ತಿದ್ದಾರೆ. ಆದ್ದರಿಂದ ದೇವರ ಜ್ಞಾನವನ್ನು ಕೇಳಿದವರೆಲ್ಲಾ ಅದನ್ನು ಜೀರ್ಣಿಸಿಕೊಳ್ಳುತ್ತಾರೆಂಬ ನಂಬಿಕೆ ಇಲ್ಲ. ಕೆಲವರು ದೇವರ ಧರ್ಮಗಳನ್ನು

ಚೆನ್ನಾಗಿ ತಿಳಿದುಕೊಂಡರೆ, ಕೆಲವರು ಮಾತ್ರ ಅರ್ಥಮಾಡಿಕೊಳ್ಳುವುದರಲ್ಲಿ ತಪ್ಪಾಗಿ ತಿಳಿದು, ದೇವರ ಜ್ಞಾನವನ್ನು ತಿಳಿದುಕೊಂಡಿದ್ದೇವೆಂದುಕೊಳ್ಳುತ್ತಾ, ದೇವರ ಧರ್ಮಗಳಿಗೆ ದೂರವಾಗಿ ಹೋಗುತ್ತಿದ್ದಾರೆ. ನಾವು ನೋಡಿರುವಮಟ್ಟಿಗೆ ಬಹಳಕಡೆ ದೇವರ ಜ್ಞಾನವನ್ನು ತಿಳಿದುಕೊಂಡಿದ್ದೇವೆಂದು ಗುರುಗಳಂತೆ, ಬೋಧಕರಂತೆ ಚಲಾವಣೆ ಆಗುತ್ತಿರುವವರು ಚೆನ್ನಾಗಿ ಬೋಧಿಸುವ ಸ್ಥಿತಿಯಲ್ಲಿದ್ದು, ತಾವು ಅರ್ಥಮಾಡಿಕೊಳ್ಳುವುದರಲ್ಲಿ ಗೊಂದಲಪಟ್ಟು, ದೇವರು ಒಂದು ಹೇಳಿದ್ದರೆ ಬೋಧಕರು ಮತ್ತೊಂದು ಹೇಳುತ್ತಿದ್ದಾರೆ. ಭೂಮಿ ಮೇಲೆ ಇಂದೂಧರ್ಮಗಳು (ದೇವರ ಧರ್ಮಗಳು) ತಿಳಿಯಬೇಕೆಂದು ದೇವರು ಭಗವಂತನಾಗಿ ಬಂದು ಪ್ರತ್ಯಕ್ಷವಾಗಿ ಕೆಲವು ಪ್ರಾಂತಗಳಲ್ಲಿ ಮನುಷ್ಯರಿಗೆ ಹೇಳಿಹೋದರೆ, ಮನುಷ್ಯರೊಂದಿಗೆ ಎಷ್ಟೋ ಆಸಕ್ತಿಯಿಂದ ಕೇಳಿದ ಗ್ರಹಗಳು, ಭೂತಗಳು ದೇವರು ಹೇಳಿದ ಧರ್ಮಗಳನ್ನು ಅನೇಕ ಪ್ರಾಂತಗಳಲ್ಲಿ ತಿಳಿಸಿ ದೇವರಿಗೆ ಸೇವೆ ಮಾಡುತ್ತಿವೆ. ದೇವರಿಗೆ ಸೇವೆ ಮಾಡಬೇಕೆಂಬ ಉದ್ದೇಶದಿಂದ ದೇವರು ತಿಳಿಸಿದ ಸಮಾಚಾರ ವನ್ನು ದೂತರಾಗಿ ಕೆಲಸ ಮಾಡಿದ ಗ್ರಹಗಳು, ಭೂತಗಳು ಅನೇಕ ಪ್ರಾಂತಗಳಿಗೆ ಸೇರಿಸುತ್ತಿವೆ. ದೇವರ ಸಮಾಚಾರವನ್ನು ಅರ್ಥ ಮಾಡಿಕೊಳ್ಳುವುದರಲ್ಲಾಗಲಿ, ಪುನಃ ಮನುಷ್ಯರಿಗೆ ಹೇಳುವುದರಲ್ಲಾಗಲಿ, ದೇವದೂತರಾಗಿ ಕೆಲಸ ಮಾಡುವವರು ಎಲ್ಲಿಯೂ ತಪ್ಪು ಮಾಡುವುದಿಲ್ಲ. ದೇವರು ಹೇಗೆ ತಿಳಿಸಿದ್ದರೆ ಕಿಂಚಿತ್ತು ಬದಲಾವಣೆ ಇಲ್ಲದಂತೆ ಹಾಗೆಯೇ ಮನುಷ್ಯರಿಗೆ ತಿಳಿಸುತ್ತಿದ್ದಾರೆ. ದೇವದೂತ ರಾದವರು ಎಷ್ಟೋ ಖಚಿತವಾಗಿ ದೇವರ ಜ್ಞಾನವನ್ನು ತಿಳಿಸಿದರೂ, ಅದನ್ನು ಕೆಲವರು ಮನುಷ್ಯರು ಸರಿಯಾಗಿ ಅರ್ಥಮಾಡಿಕೊಳ್ಳುತ್ತಿದ್ದಾರೆ. ಕೆಲವರು ತಮಗಿರುವ ಅವಗಾಹನೆ ಲೋಪದಿಂದ ಬೇರೆಯಾಗಿ ಅರ್ಥಮಾಡಿಕೊಳ್ಳುತ್ತಿದ್ದಾರೆ. ಹೆಚ್ಚಾಗಿ ಬೋಧಕರಾದವರು, ಗುರುಗಳಂತೆ ಚಲಾವಣೆ ಆಗುವವರು, ದೇವರ ಸಮಾಚಾರವನ್ನು ಅರ್ಥಮಾಡಿಕೊಳ್ಳುವುದರಲ್ಲಿ ನಾವು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತೇವೆಂದು ಅಂದುಕೊಳ್ಳುತ್ತಲೆ ತಪ್ಪಾಗಿ ಅರ್ಥೈಸಿಕೊಳ್ಳುತ್ತಿದ್ದಾರೆ. ಕೊನೆಗೆ ತಮಗೆ ತಿಳಿದಿರುವುದೇ ನಿಜವಾದ ಜ್ಞಾನವೆಂದು ಪ್ರಜೆಗಳಿಗೆ ಬೋಧಿಸುತ್ತಿದ್ದಾರೆ.

ಮನುಷ್ಯರು ಜ್ಞಾನ ವಿಷಯದಲ್ಲಿ ಎರಡು ವಿಧಗಳಾಗಿ ಇದ್ದಾರೆ. ಕೇಳಿ ತಿಳಿದುಕೊಳ್ಳಬೇಕೆನ್ನುವವರು ಸುಮಾರು ಶೇಕಡ 95 ರಷ್ಟು ಇದ್ದರೆ, ನಮಗೆ ತಿಳಿದಿದೆಯೆಂದು ಗುರುಗಳಾಗಿ, ಬೋಧಕರಾಗಿ ಇದ್ದು ಇತರರಿಗೆ ಹೇಳುತ್ತೇವೆನ್ನುವವರು ಶೇಕಡ 5 ರಷ್ಟು ಜನ ಇದ್ದಾರೆ. ಬೋಧಕರಂತಿರುವ ಈ ಐದು ಶಾತ ಇರುವವರನ್ನು ಮಾತ್ರವೆ ಕೆಲವು ಸಾವಿರ ಜನರನ್ನು ಒಂದುಕಡೆ ಸೇರಿಸಿ ನೋಡಿದರೆ, ಅದರಲ್ಲಿ ದೇವರ ಜ್ಞಾನವನ್ನು ಸರಿಯಾದ ಪದ್ಧತಿಯಲ್ಲಿ ಅರ್ಥಮಾಡಿಕೊಂಡವನು ಒಬ್ಬನು ಅಪರೂಪವಾಗಿ ಕಾಣಿಸುವನು. ಬೋಧಿಸುವ ವರು ತಮಗೆ ತಿಳಿದಿರುವುದೆ ಸರಿಯಾದ ಜ್ಞಾನವೆಂದುಕೊಳ್ಳುವು ದರಿಂದ ತನ್ನ ದಾರಿ ತಪ್ಪುದಾರಿಯೆಂದಾಗಲಿ, ಅದನ್ನು ಸರಿಮಾಡಿಕೊಳ್ಳೋಣ ವೆಂದಾಗಲಿ ಅಂದುಕೊಳ್ಳುವುದಿಲ್ಲ. ಆದ್ದರಿಂದ ಅಂತವರಿಗೆ ದೇವರೇ ಇಳಿದುಬಂದು ನಾನು ಹೇಳಿರುವುದು ಹೀಗಲ್ಲ, ನಾನು ಹೇಳಿದ ಭಾವ ಬೇರೆಯೆಂದು ತಿಳಿಸಿದರೂ, ನನಗೆ ಎಲ್ಲಾ ತಿಳಿದಿದೆಯೆಂದು ಅಂದುಕೊಳ್ಳುವವನು ಸ್ವಲ್ಪವನ್ನಾದರೂ ಕೇಳುವುದಿಲ್ಲ. ಅಂತವನು ತನಗೆ ತಿಳಿದಿರುವುದು ಏನು ಎಂದು ಆಲೋಚಿಸದೆ, ಸಾಟಿ ಮನುಷ್ಯರಿಗೆ ಬೋಧಿಸುವುದರಿಂದ, ಕೇಳಿದವರು ಸಹ ಆತನು ಹೇಳುವ ಜ್ಞಾನವನ್ನು ಅನುಸರಿಸುವುದರಿಂದ, ದೇವರ ಜ್ಞಾನ ಧರ್ಮಬದ್ಧವಾಗಿ ಮನುಷ್ಯರಿಗೆ ತಿಳಿಯದಂತೆ ಹೋಗುತ್ತಿದೆ. ಎಲ್ಲೋ ಒಂದು ಕಡೆ ಸರಿಯಾದ ಭಾವದಿಂದ ಹೇಳುವ ಜ್ಞಾನ ಸ್ವಲ್ಪ ಜನ ಮನುಷ್ಯರಿಗೆ ಮಾತ್ರ ತಿಳಿಯುತ್ತಿದೆ. ಆದ್ದರಿಂದ ಐದುಸಾವಿರ ವರ್ಷಗಳ ಪೂರ್ವದಲ್ಲಿ ಪ್ರಾರಂಭಿಸಿದ ಧರ್ಮ ಸಂಸ್ಥಾಪನೆ ಇಲ್ಲಿಯವರೆಗು ಪೂರ್ತಿಯಾಗಿಲ್ಲ. ಪೂರ್ತಿ ಆಗುವುದಕ್ಕೆ ಎಷ್ಟು ಕಾಲ ಬೇಕಾಗುತ್ತದೊ ದೇವರಿಗೆ ಗೊತ್ತು.

ದೇವರು ಆದಿಯಲ್ಲಿ ತಿಳಿಸಿದ ಜ್ಞಾನವನ್ನೇ ನಂತರ ಯಾವಾಗ ಹೇಳಿದರೂ ಬದಲಾವಣೆ ಇಲ್ಲದಂತೆ ಹೇಳುವನು. ದೇವರು ಶಾಶ್ವತವಾದವನು, ಬದಲಾಗುವವನಲ್ಲ. ಆದ್ದರಿಂದ ಆತನ ಧರ್ಮಗಳು ಸಹ ಬದಲಾಗುವಂತವಲ್ಲ. ಪ್ರಪಂಚದಲ್ಲಿ ಎಷ್ಟು ಮತಗಳು ಹುಟ್ಟಿದರೂ ಅವು ದೇವರಿಗೆ ತಿಳಿಯದೆ ಹುಟ್ಟಲಿಲ್ಲ.

ದೇವರಿಗೆ ತಿಳಿಯದಂತೆ ನಡೆಯುವವು ಯಾವುವು ಇಲ್ಲ. ಮನುಷ್ಯರು ಒಂದು ಮತವನ್ನು ತಯಾರು ಮಾಡಿಕೊಳ್ಳದ ಮೊದಲೇ ದೇವರು ಅದಕ್ಕೆ ಸಂಬಂಧಿಸಿದ ಜ್ಞಾನವನ್ನು ನಮಗೆ ಒದಗಿಸುವನು. ಅದರ ಪ್ರಕಾರ ಪ್ರತಿ ಮತಕ್ಕು ಒಂದು ಮೂಲಗ್ರಂಥವಿರುತ್ತದೆ. ಅದರಲ್ಲಿ ದೇವರ ಧರ್ಮಗಳಿರುತ್ತವೆ. ಉದಾಹರಣೆಗೆ ಇಸ್ಲಾಮ್‌ನ್ನು ತೆಗೆದುಕೊಳ್ಳೋಣ. ಇಸ್ಲಾಮ್‌ಗೆ ಮೊದಲೇ ದೈವದೂತನಿಂದ ದೇವರ ಧರ್ಮಗಳನ್ನು ಹೇಳಿದ ಖುರಾನ್ ಗ್ರಂಥ ಬಂದಿದೆ. ಖುರಾನ್ ಗ್ರಂಥದಲ್ಲಿ ದೇವರ ಧರ್ಮಗಳು ಪೂರ್ತಿಯಾಗಿ ಹೇಳಲ್ಪಟ್ಟಿವೆ. ಆದರೆ ಕೆಲವರು ಮುಸ್ಲಿಮ್‌ರು ಹೇಳಿದ ಬೋಧನೆಗಳ ಪ್ರಕಾರ ನೋಡಿದರೆ ಇವು ದೇವರ ಧರ್ಮಗಳೇನಾ? ಎಂದು ಅನುಮಾನ ಬರಬಹುದು. ಬಹಳ ಜನ ಮುಸ್ಲಿಮ್‌ರು ದೇವರ ಮೇಲೆ ವಿಶ್ವಾಸ ಹೊಂದಿ ದೇವರ ಧರ್ಮಗಳನ್ನು ತಿಳಿದುಕೊಳ್ಳಬೇಕೆಂದಿದ್ದರೂ, ಅವುಗಳನ್ನು ಸರಿಯಾಗಿ ತಿಳಿಸುವವರು ಇಲ್ಲದೇ ಅವರು ದೇವರ ಧರ್ಮಗಳನ್ನು ತಿಳಿಯದೆ ಇದ್ದಾರೆ. ಜಿಬ್ರಾಯಿಲ್ ಧೂತ ಸ್ವಚ್ಛವಾದ ದೇವರ ಧರ್ಮಗಳನ್ನು ತಿಳಿಸಿದರೆ, ಮುಹಮ್ಮದ್ ಪ್ರವಕ್ತರಿಂದ ಹೊರ ಬಂದಿರುವುದು ಖುರಾನ್ ಗ್ರಂಥ. ಖುರಾನ್ ದೈವಗ್ರಂಥವಾದಾಗ ಅದರಲ್ಲಿ ದೇವರ ಧರ್ಮಗಳು ಇರುವುದು ವಾಸ್ತವವೆ ಅಲ್ಲವೆ! ಆದರೆ ಇಸ್ಲಾಮ್ ಬೋಧಕರು ಖುರಾನ್‌ನಲ್ಲಿನ ದೇವರ ಧರ್ಮಗಳನ್ನು ಹೇಳಿದ್ದಾರಾ? ಅವರು ನಾವು ನಿಜವೆ ಹೇಳುತ್ತಿದ್ದೇವೆಂದು ಅಂದುಕೊಂಡರೂ, ಅವರು ಏನು ಹೇಳುತ್ತಿದ್ದಾರೊ, ಎಷ್ಟು ಸತ್ಯ ಹೇಳುತ್ತಿದ್ದಾರೊ ನಮಗೆ ತಿಳಿದಿದೆ. ದೇವರು ಇಲ್ಲೇ ಇದೆಯೆಂದು ಹೇಳಿರುವುದನ್ನು ಎಲ್ಲೋ ಇದೆಯೆಂದು ಹೇಳುತ್ತಿದ್ದಾರೆ. ಸಾವು ಹುಟ್ಟುಗಳ ಕುರಿತು, ಸ್ವರ್ಗ ನರಕಗಳ ಕುರಿತು, ಮತ್ತೆಷ್ಟೋ ವಿಷಯಗಳ ಕುರಿತು ದೇವರು ಒಂದೊಂದು ಮತಕ್ಕೆ ಒಂದೊಂದು ವಿಧವಾಗಿ ಹೇಳಲಿಲ್ಲ. ಧರ್ಮಗಳು ಎಲ್ಲ ಮತಗಳಿಗು ಒಂದೇ ವಿಧವಾಗಿ ಇರುವವೆಂದು ಯಾರೂ ಮರೆಯಬಾರದು. ಯಾವ ವಿಷಯದಲ್ಲಿ ತಪ್ಪಾಗಿ ಹೇಳಿದರು ಫರವಾಗಿಲ್ಲ, ಆದರೇ ದೇವರ ವಿಷಯದಲ್ಲಿ ಕನಸಿನಲ್ಲೂ ಸಹ ತಪ್ಪಾಗಿ ಹೇಳುವುದಾಗಲಿ, ಮಾಡುವುದಾಗಲಿ ಇರಬಾರದು. ಹಾಗೆ ಮಾಡಿದರೆ ದೇವರ ಆಗ್ರಹಕ್ಕೆ ಗುರಿಯಾಗದೆ ತಪ್ಪುವುದಿಲ್ಲವೆಂದು ಹೇಳಿದರೂ

ದೇವರಿಗೆ ಕೋಪವಿಲ್ಲ, ಬರುವುದಿಲ್ಲ. ಆದರೆ ದೇವದೂತರಿಗೆ ಕೋಪ ಬರುತ್ತದೆ ಅವರು ಶಿಕ್ಷಿಸದೇ ಬಿಡುವುದಿಲ್ಲ.

ದೇವರ ಧರ್ಮಗಳೆಂದರೆ ಏನೊ, ಅವು ಹೇಗೆ ಇರುತ್ತವೊ, ಅವುಗಳ ಅರ್ಥ ಹೇಗೆ ಇರುತ್ತದೊ, ಆಚರಣೆ ಹೇಗೆ ಇರುತ್ತದೊ, ನನಗೆ ಚೆನ್ನಾಗಿ ತಿಳಿದಿದೆಯೆಂದೆ ಹೇಳಬೇಕು. ಆದರೂ ದೇವರಿಗೆ ಕೋಪ ಬರುತ್ತದೆಂದು ಹೇಳಿದ ಮಾತು ಎಷ್ಟು ನಿಜವೊ, ನನಗೆ ಧರ್ಮಗಳು ತಿಳಿದಿವೆಯೆನ್ನುವುದು ಅಷ್ಟೇ ನಿಜ. ವಾಸ್ತವವಾಗಿ ದೇವರಿಗೆ ಕೋಪ ಬರದಿದ್ದರೂ ಆತನ ದೂತರಿಗೆ ಕೋಪ ಬರುತ್ತದೆನ್ನುವುದು ಸತ್ಯ. ಹಾಗೇ ನನಗೆ ಧರ್ಮಗಳು ತಿಳಿಯದಿದ್ದರೂ ನನ್ನ ಆತ್ಮಕ್ಕೆ ಧರ್ಮಗಳು ತಿಳಿದಿವೆಯೆನ್ನುವುದು ವಾಸ್ತವ. ಕಾಣಿಸದ ವಿಷಯ ಯಾರಿಗೂ ತಿಳಿಯುವುದಿಲ್ಲ, ಆದ್ದರಿಂದ ಸುಲಭವಾಗಿ ಅರ್ಥವಾಗುವುದಕ್ಕೆ ಅಲ್ಲಿ ದೇವರಿಗೆ ಕೋಪ ಬರುತ್ತದೆಂದೆ ಹೇಳಬೇಕು. ಇಲ್ಲಿ ನನಗೆ ಧರ್ಮಗಳು ತಿಳಿದಿವೆಯೆಂದೆ ಹೇಳಬೇಕು. ಇಲ್ಲಿ ಒಂದು ವಿಷಯವನ್ನು ಹೇಳಿಕೊಳ್ಳೋಣ. ಸಮುದ್ರ ತೀರಕ್ಕೆ ಪಕ್ಕದಲ್ಲಿಯೆ ಒಂದು ಮುಸ್ಲಿಮ್ ದೇಶ ಇದೆ. ಅದರ ಹೆಸರು ಸರಿಯಾಗಿ ಜ್ಞಾಪಕವಿಲ್ಲ. ಅದರ ಹೆಸರು ಎಮಾನ್ ಅಥವಾ ಒಮಾನ್ ಅಂದುಕೊಳ್ಳುತ್ತೇನೆ. 2004ನೇ ವರ್ಷದಲ್ಲಿ ಸುನಾಮಿ ಬಂದು ತೀರ ಪ್ರಾಂತವೆಲ್ಲಾ ಭಯಂಕರವಾಗಿ ನಷ್ಟಹೊಂದಿತು. ಬಹಳ ಜನ ಸತ್ತುಹೋದರು. 2005ನೇ ವರ್ಷದಲ್ಲಿ ಆ ದೇಶದಲ್ಲಿ ಕೆಲವು ಪ್ರಾಂತಗಳಲ್ಲಿ ಪೊಲೀಸರು ರಾತ್ರಿಹೊತ್ತು ಕಾವಲು ಕಾಯುತ್ತಾ ತಿರುಗುತ್ತಾ ಕೆಲವು ಪ್ರಾಂತಗಳಲ್ಲಿ ತನಿಖೆಗಳು ಮಾಡುತ್ತಾ, ಒಂದು ಹೋಟಲ್‌ನಲ್ಲಿ ಮನುಷ್ಯರಿದ್ದರೆ ಆ ಹೋಟಲ್‌ಗೆ ಹೋಗಿ ಮತ್ತಿನ ಪಾನೀಯುವನ್ನು ಕುಡಿದು ಹಾಕಿದ ಖಾಲಿಬಾಟಲ್‌ನ್ನು ಹುಡುಕಿ ಹಿಡಿದುಕೊಂಡರು. ಒಂದು ವಿದೇಶೀಯ ಜರ್ನಲಿಸ್ಟು ಅದನ್ನು ಕೇಳಿದರೆ ಅಲ್ಲಿನ ಪೊಲೀಸರು "ಮತ್ತು ಪಾನೀಯಗಳು ಕುಡಿಯುವುದು ದೊಡ್ಡ ಅಪರಾದ, ದೇವರು ಸಹ ಒಪ್ಪಿಕೊಳ್ಳುವುದಿಲ್ಲ. ನಾವು ಬಿಟ್ಟರೂ ದೇವರು ಬಿಡುವುದಿಲ್ಲ. ಮನುಷ್ಯರು ಇಂತಹ ಕೆಲಸಗಳು ಮಾಡಿದರೆ ದೇವರಿಗೆ ಕೋಪ ಬರುತ್ತದೆ.

ದೇವರಿಗೆ ಕೋಪ ಬಂದರೆ ಇದಕ್ಕೂ ಮೊದಲು ಬಂದ ಸುನಾಮಿಗಿಂತ ದೊಡ್ಡ ಭೂಕಂಪ, ಸುನಾಮಿಗಳಿಂದ ದೇವರು ಶಿಕ್ಷಿಸುತ್ತಾನೆ" ಎಂದರು. ಆ ಪೋಲೀಸರು ಹೇಳಿದ ಮಾತನ್ನು ಅನುಸರಿಸಿ ನೋಡಿದರೆ ಅಲ್ಲಿನ ಪೋಲೀಸರಿಗು ಸಹ ದೇವರೆಂದರೆ ಭಯವಿರುವಂತೆ ತಿಳಿಯುವುದೆ ಅಲ್ಲದೆ, ತಪ್ಪು ಮಾಡಿದರೆ ದೇವರಿಗೆ ಕೋಪ ಬರುತ್ತದೆ ಎನ್ನುವುದು ನಮಗೆಷ್ಟೊ ಇಷ್ಟವಾಯಿತು. ಅದಕ್ಕೂ ಮೊದಲು ಸುನಾಮಿ ದೇವರ ಕೋಪದಿಂದ ಬಂದಿದೆಯೆಂದು ಅವರು ನಂಬುತ್ತಿದ್ದಾರೆ. ನಮ್ಮ ದೇಶದಲ್ಲಿ ದೇವರ ಮುಂದೆಯೆ ತಪ್ಪು ಮಾಡುತ್ತೇವೆನ್ನುವವರಿದ್ದಾರೆ. ದೇವರ್‍ಯಾರು, ಅವನ ಅಡ್ರಸು ಎಲ್ಲಿ ಎನ್ನುವವರು ಸಹ ಇದ್ದಾರೆ. ಆದರೆ ಆ ದೇಶದಲ್ಲಿ ತಪ್ಪು ಮಾಡಿದರೆ ದೇವರಿಗೆ ಕೋಪ ಬರುತ್ತದೆಂದುಕೊಳ್ಳುವುದು ತಪ್ಪು ಮಾಡದೆ ದೇವರನ್ನು ಜ್ಞಾಪಕದಲ್ಲಿಟ್ಟು ಕೊಳ್ಳುವುದು, ದೇವರಿಗೆ ಕೋಪ ಬರುತ್ತದೆಂದು ಭಯಪಡುವುದು ನೋಡಿದರೆ ನಮಗಿಂತ ಆ ದೇಶದವರು ಎಷ್ಟೋ ಪಟ್ಟು ಮೇಲೆನಿಸುತ್ತದೆ.

ವಾಸ್ತವಕ್ಕೆ ದೇವರಿಗೆ ಗುಣಗಳು ಇಲ್ಲ, ಆತನಿಗೆ ಕೋಪಬರುವುದಿಲ್ಲ. ಆತನಿಗೆ ಕೋಪ ಬರದಿದ್ದರೂ ಪಾಪದ ಕೆಲಸಗಳು ಮಾಡುವುದರಿಂದ ಅವುಗಳ ಫಲವಾಗಿ ಸುನಾಮಿ ಬಂದು ಮನುಷ್ಯರು ಬಾಧೆಪಟ್ಟಿರುವುದು ನಿಜವೆ. ದೇವರಿಗೆ ಕೋಪ ಬರದಿದ್ದರೂ, ಸುನಾಮಿಯನ್ನು ದೇವರು ಸೃಷ್ಠಿಸದಿದ್ದರೂ ಆತನ ಪರಿಪಾಲನೆಯಲ್ಲಿನ ಗ್ರಹಗಳು, ಭೂತಗಳು ಮಾನವನ ಪ್ರವರ್ತನೆಯನ್ನು ನೋಡಿ ಕೋಪಿಸಿಕೊಂಡು ಸುನಾಮಿಗಳನ್ನು, ಭೂಕಂಪಗಳನ್ನು, ಟೋರ್ನಡೋಲನ್ನು (ವಾಯುಮೇಘಗಳನ್ನು) ಸೃಷ್ಠಿಸಿ ಅವುಗಳ ಹಿಂಬದಿಯಿಂದ ಮಾನವರನ್ನು ಶಿಕ್ಷಿಸುತ್ತಿದ್ದಾರೆ. ಮಳೆಯಿಂದಲೂ, ಪ್ರವಾಹಗಳಿಂದಲೂ ಮನುಷ್ಯರಿಗೆ ಭಯವನ್ನು ಹುಟ್ಟಿಸಿ ಹಿಂಸಿಸುತ್ತಾರೆ. ಇದೆಲ್ಲವೂ ಕಾಣಿಸದ ಗ್ರಹಗಳಿಂದ, ಭೂತಗಳಿಂದ ನಡೆಯುತ್ತಿದೆಯೆಂದು ಯಾರಿಗೂ ತಿಳಿದಿಲ್ಲ. ಕೆಲವರು ಎಷ್ಟು ಬಾಧೆಗಳನ್ನು ಅನುಭವಿಸುತ್ತಿದ್ದರೂ ದೇವರು ಎನ್ನುವ ಭಯ ಇಲ್ಲದಂತೆ ಇದ್ದಾರೆ. ಕೆಲವರು ದೇವರಿಗೆ ಕೋಪ ಬರುತ್ತದೆಂದು ಭಯಪಡುತ್ತಿದ್ದಾರೆ.

ಪ್ರವಾಹಗಳು, ಸುನಾಮಿಗಳು, ಭೂಕಂಪಗಳ ಹಿಂದೆ ಏನು ನಡೆಯುತ್ತಿದೆಯೆಂದು ತಿಳಿಯದಿದ್ದರೂ, ದೇವರಿಂದಲೆ ನಡೆಯುತ್ತಿವೆಯೆಂದುಕೊಳ್ಳುವುದು ಒಳ್ಳೆಯದೆ. ವಿವರಿಸಿಕೊಂಡು ನೋಡಿದರೆ ದೇವರು ಏನು ಮಾಡುವವನಲ್ಲವೆಂದು, ದೇವರ ಕೆಳಗೆ ದೇವರ ಅಧೀನದಲ್ಲಿರುವವರು ಮಾಡುತ್ತಿದ್ದಾರೆಂದು ತಿಳಿಯುತ್ತದೆ. ತಪ್ಪು ಮಾಡಿದರೆ ಶಿಕ್ಷೆ ತಪ್ಪುವುದಿಲ್ಲ. ಆದರೆ ದೇವರ ಜ್ಞಾನದ ಬಳಿ ಯಾವ ತಪ್ಪು ಮಾಡಿದರೂ ಒಂದಕ್ಕೆ ನೂರರಷ್ಟು ಶಿಕ್ಷೆ ಹೆಚ್ಚಾಗಿ ಇರುವುದು. ದೇವರ ಜ್ಞಾನವನ್ನು ತಿಳಿಯದಿದ್ದರೂ ನನಗೆ ತಿಳಿದಿದೆಯೆಂದು ಇತರರನ್ನು ತಪ್ಪುದಾರಿ ಇಡಿಸಿದರೆ ದೊಡ್ಡ ಪಾಪ ಬರುತ್ತದೆ. ಅಷ್ಟೇ ಅಲ್ಲದೇ ಎಲ್ಲಾದರೂ ದೇವರ ಜ್ಞಾನದಲ್ಲಿನ ಸತ್ಯವನ್ನು ಯಾರಾದರೂ ಹೇಳುತ್ತಿರುವಾಗ ಅದನ್ನು ಖಂಡಿಸಿದರೂ, ಇಲ್ಲವೇ ವಿರೋಧಿಸಿದರೂ ದೇವರ ಮಾರ್ಗಕ್ಕೆ, ದೇವರ ಧರ್ಮಕ್ಕೆ ವಿರುದ್ಧವಾಗಿ ಮಾತನಾಡಿದಂತಾಗುತ್ತದೆ. ಆದ್ದರಿಂದ ಆಗಲೂ ಸಹ ಮಹಾಪಾಪ ಸಂಭವಿಸುತ್ತದೆ. ದೇವರ ಜ್ಞಾನದಲ್ಲಿ ಏನಾದರೂ ತಪ್ಪಾಗಿ ಹೇಳಿದರೂ ಮಹಾಪಾಪ ಬರುತ್ತದೆಂದು, ದೊಡ್ಡ ಶಿಕ್ಷೆ ಬೀಳುತ್ತದೆಂದು ಹೇಳುತ್ತಿದ್ದ ನಾನು ಬಹಳ ಜನರಿಗೆ ಜ್ಞಾನ ಸಕ್ರಮವಾಗಿ ತಿಳಿದಿಲ್ಲವೆಂದು, ದೇವರ ಧರ್ಮಗಳು ಯಾರಿಗು ಅರ್ಥವಾಗಿಲ್ಲವೆಂದು, ಪ್ರತಿ ಮತದಲ್ಲಿಯೂ ದೇವರ ಜ್ಞಾನದ ಬಳಿ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆಂದು ಹೇಳುವುದರಲ್ಲಿ ನನ್ನದು ಏನಾದರೂ ತಪ್ಪಾದರೆ ನನಗೂ ಸಹ ಪಾಪ ತಪ್ಪುವುದಿಲ್ಲ, ಶಿಕ್ಷೆ ತಪ್ಪುವುದಿಲ್ಲ. ಆದರೆ ಧರ್ಮಗಳಲ್ಲಿ ಸತ್ಯಾಸತ್ಯಗಳಾವುವೊ ನನಗೆ ಚೆನ್ನಾಗಿ ತಿಳಿದಿವೆ. ಅವುಗಳನ್ನು ನಾನು ಮರೆತುಹೋಗಿಲ್ಲ. ಆದ್ದರಿಂದ ಧೈರ್ಯವಾಗಿ ಹೇಳುತ್ತಿದ್ದೇನೆ. ಪ್ರಪಂಚ ವಿಷಯಗಳಲ್ಲಿ ನನಗೆ ಜ್ಞಾಪಕಶಕ್ತಿ ಕಡಿಮೆ, ಅದೇ ದೈವ ವಿಷಯಗಳಲ್ಲಾದರೆ ಜ್ಞಾಪಕಶಕ್ತಿ ಹೆಚ್ಚಾಗಿ ಇರುತ್ತದೆ. ನಿಮಗೆ ಪ್ರಪಂಚ ವಿಷಯಗಳಲ್ಲಿ ಜ್ಞಾಪಕಶಕ್ತಿ ಹೆಚ್ಚಾಗಿರುತ್ತದೆ. ಇನ್ನು ದೈವ ಧರ್ಮಗಳೆಂದರೆ ಯಾವುವೊ, ಅವುಗಳಿಗೆ ಇರಬೇಕಾದ ಹೆಸರು ಏನೊ? ಅವು ಎಲ್ಲಿವೆಯೊ? ಎಲ್ಲರಿಗೂ ತಿಳಿದಿಲ್ಲ. ಆದ್ದರಿಂದ ಅವುಗಳನ್ನು ಈಗ ತಿಳಿದುಕೊಳ್ಳಬೇಕಾಗಿದೆ.

ದೇವರ ಧರ್ಮಗಳೆಂದರೆ ಯಾವುವೊ ನನಗೆ ಮೊದಲಿನಿಂದಲೂ ಜ್ಞಾಪಕದಲ್ಲಿವೆ. ನಾನು ಹೊಸದಾಗಿ ಕಲಿತುಕೊಳ್ಳಬೇಕಾದ ಕೆಲಸವಿಲ್ಲ. ಆದ್ದರಿಂದ ಕ್ರೈಸ್ತದಲ್ಲಾಗಲಿ, ಇಸ್ಲಾಮ್‌ನಲ್ಲಾಗಲಿ, ಅವರ ಮೂಲಗ್ರಂಥಗಳಲ್ಲಿರುವ ಧರ್ಮಗಳನ್ನು ಅವರು ಸಕ್ರಮವಾಗಿ ವಿವರಿಸದಿದ್ದರೂ, ಕೆಲವನ್ನು ಸೂಕ್ಷ್ಮಗಳೆಂದು ಬಿಟ್ಟು ಹಾಕಿದರೂ, ಅನವಶ್ಯವಾಗಿ ಸ್ಥೂಲವಾಗಿ ಅರ್ಥ ಹೇಳುತ್ತಿದ್ದರೂ, ಅವರು ಮಾಡುವ ತಪ್ಪೇನೊ, ಒಪ್ಪೇನೋ ನನಗೆ ಸುಲಭವಾಗಿ ಅರ್ಥವಾಗುತ್ತಿದೆ. ಅವರು ಹೇಗೆ ಹೇಳಿದರೂ ಅಲ್ಲಿರುವವು ನಿಜವಾದ ದೈವಧರ್ಮಗಳೆಂದು ತಿಳಿದಿದೆ, ಅವುಗಳಲ್ಲಿ ಎಷ್ಟು ರಹಸ್ಯ ಅಡಗಿದೆಯೊ ಗೊತ್ತಿದೆ. ಆದ್ದರಿಂದ ಪ್ರತಿ ಮತ ಗ್ರಂಥದಲ್ಲಿನ ಧರ್ಮಗಳು ನನಗೆ ಚೆನ್ನಾಗಿ ಪರಿಚಯವಿರುವವುಗಳೆಯೆಂದು ಧೈರ್ಯವಾಗಿ ಹೇಳುತ್ತಿದ್ದೇನೆ. ಕ್ರೈಸ್ತದಲ್ಲಾಗಲಿ, ಇಸ್ಲಾಮ್‌ನಲ್ಲಾಗಲಿ ಹೇಳಿದ ದೈವಧರ್ಮಗಳನ್ನು ಕೆಲವನ್ನು ಮಾತ್ರ ಹೇಗೆ ವಿವರಿಸಿಕೊಂಡು ನೋಡಬೇಕೊ, ಎಲ್ಲರಿಗು ತಿಳಿಯುವಂತೆ ನಮೂನೆಗೆ **"ಬೈಬಲ್‌ನಲ್ಲಿನ ಪವಿತ್ರ ವಾಕ್ಯಗಳು"** ಎನ್ನುವ ಹೆಸರಿನಿಂದ ಒಂದು ಗ್ರಂಥವನ್ನು, **"ಖುರಾನ್‌ನಲ್ಲಿನ ಪವಿತ್ರ ವಾಕ್ಯಗಳು"** ಎನ್ನುವ ಹೆಸರಿಂದ ಮತ್ತೊಂದು ಗ್ರಂಥವನ್ನು ಬೇಗ ಬರೆಯಬೇಕೆಂದುಕೊಂಡೆವು. ಆ ಗ್ರಂಥಗಳಿಂದ ಎಲ್ಲ ಮತಗಳಲ್ಲಿಯು ದೇವರ ಧರ್ಮಗಳು ಬದಲಾಗದಂತೆ ಸಮಾನವಾಗಿ ಇವೆಯೆಂದು ತಿಳಿಯುವುದು. ಇಲ್ಲಿಯವರೆಗು ಭಗವದ್ಗೀತೆಗು ಬೈಬಲ್‌ಗು, ಬೈಬಲ್‌ಗು ಖುರಾನ್‌ಗು, ಖುರಾನ್‌ಗು ಭಗವದ್ಗೀತೆಗು ಕೆಲವು ವಿಷಯಗಳಲ್ಲಿ ವ್ಯತ್ಯಾಸಗಳಿವೆಯೆಂದು, ಬೇರೆಬೇರೆ ಮತಗಳಾಗಿರುವುದರಿಂದ ಆ ಮೂಲಗ್ರಂಥಗಳಲ್ಲಿ ಬೇರೆಬೇರೆ ಧರ್ಮಗಳೂ, ಅವುಗಳಿಗೆ ಬೇರೆಬೇರೆ ಭಾವಗಳಿವೆಯೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಆದರೆ ನಾವು ಬರೆಯುವ ಗ್ರಂಥಗಳಲ್ಲಿ, ಎಲ್ಲ ಮೂಲಗ್ರಂಥಗಳಲ್ಲಿ ಹೇಳಿರುವವು ಒಂದೇ ಧರ್ಮವೆಂದು, ಒಂದೇ ಭಾವಗಳೆಂದು ವಿಶದೀಕರಿಸಿ ಶಾಸ್ತ್ರಬದ್ಧವಾಗಿ ಹೇಳಲಾಗುತ್ತದೆ.

ದ್ವಾಪರಯುಗದಲ್ಲಿ ದೇವರು ಭಗವಂತನಿಂದ ಭಗವದ್ಗೀತೆಯನ್ನು ಬೋಧಿಸಿದ್ದಾನೆ. ಅದರಲ್ಲಿ ವಿಜ್ಞಾನಯೋಗ ಎಂಬ ಅಧ್ಯಾಯದಲ್ಲಿ 14ನೇ ಶ್ಲೋಕದಲ್ಲಿ ಹೇಳಿದ ಸಾರಾಂಶ ಹೀಗಿದೆ **"ನಾನು ಮಾಯೆ ಎನ್ನುವುದನ್ನು ತಯಾರು ಮಾಡಿ ಇಟ್ಟಿದ್ದೇನೆ. ಅದನ್ನು ದಾಟುವುದಕ್ಕೆ ಯಾರಿಗೂ ಸಾಧ್ಯವಲ್ಲ"** ಎಂದು ಹೇಳಲಾಗಿದೆ. ಈ ಶ್ಲೋಕದಲ್ಲಿನ ಭಾವವನ್ನು ಓದಿದ ನಂತರ ನಮಗೆ ಒಂದು ಪ್ರಶ್ನೆ ಬರಬಹುದು. ದೇವರು ತನಗು, ಮನುಷ್ಯನಿಗು ನಡುವೆ ಮಾಯೆಯನ್ನು ಏಕೆ ಇಟ್ಟುಕೊಂಡಿದ್ದಾನೆ? ಅದನ್ನು ದಾಟಿ ಬರುವುದಕ್ಕೆ ಯಾರಿಗು ಸಾಧ್ಯವಿಲ್ಲ ಎಂದಿದ್ದಾನೆ. ಮನುಷ್ಯನಿಗೆ ಸಾಧ್ಯವಾಗದ ಬಲವಾದ ಮಾಯೆಯನ್ನು ಏಕೆ ನಿಯಮಿಸಿಕೊಂಡಿದ್ದಾನೆ? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಸಮಾಧಾನ ಹುಡುಕಿದರೆ ಹೀಗಿದೆ. ಒಬ್ಬ ಮನುಷ್ಯ ಒಂದು ಊರಿನಲ್ಲಿ ಮನೆ ಕಟ್ಟಿಕೊಂಡಿದ್ದಾನೆ. ಆ ಊರಿನಲ್ಲಿನ ಮನುಷ್ಯರು ನಾಲ್ಕು ವಿಧದವರಿದ್ದಾರೆ. ಆ ನಾಲ್ಕು ವಿಧಗಳ ಮನುಷ್ಯರ ನಡುವೆ ಅವರಿಗಿಂತ ವಿಭಿನ್ನವಾದ ಮನಸ್ಥತ್ವವಿರುವ ವ್ಯಕ್ತಿ ನಿವಾಸ ಏರ್ಪಡಿಸಿಕೊಂಡಾಗ, ಆತನು ಮಾತ್ರ ಐದನೇ ವಿಧದವನಾಗುತ್ತಾನೆ. ಆ ಊರಿನಲ್ಲಿರುವವರೆಲ್ಲ ನಾಲ್ಕು ವಿಧದವರೆಂದಿದ್ದೇವೆ ಅಲ್ಲವೆ! ಅವರಲ್ಲಿ ಒಂದು ವಿಧದವನು ಮೋಸ ಮಾಡುವವನು, ಎರಡನೆ ವಿಧದವನು ದರೋಡೆಗಳು, ಕಳ್ಳತನಗಳು ಮಾಡುವವನು. ಮೂರನೆ ವಿಧವನು ಸುಳ್ಳು ಹೇಳುವವನು. ನಾಲ್ಕನೆಯವನು ಏನಾದರೂ ಕೇಳಿ ತೆಗೆದುಕೊಂಡು ಹೋಗುವವನು. ಈ ನಾಲ್ಕು ವಿಧದವರಿಂದ ಯಾವುದೊ ಒಂದು ವಿಧವಾಗಿ ನಷ್ಟ ಬಿಟ್ಟರೆ ಲಾಭವಿಲ್ಲ. ಐದನೆ ವಿಧದವನು ಬಹಳ ಧನಿಕನು ಉಳಿದವರ ಹಾಗೆ ನಾಲ್ಕು ವಿಧಗಳಲ್ಲಿ ಯಾವ ವಿಧ ಅಲ್ಲದವನು. ಐದನೆ ವಿಧದವನು ದೊಡ್ಡ ಧನಿಕನಾಗಿರುವುದರಿಂದ, ಊರಿನಲ್ಲಿನ ಉಳಿದ ನಾಲ್ಕು ವಿಧದವರು ಆ ಧನಿಕನ ಬಳಿಗೆ ಹೋಗಬೇಕೆಂದು ಕೊಳ್ಳುತ್ತಾರೆ. ಏಕೆಂದರೆ! ಧನಿಕನ ಬಳಿಗೆ ಹೋದರೆ ತಮಗಿರುವ ಸ್ವಭಾವದಿಂದ ಒಬ್ಬನು ಮೋಸ ಮಾಡಬಹುದು. ಮತ್ತೊಬ್ಬನು ಸಮಯ ನೋಡಿ ದರೋಡೆ ಮಾಡಬಹುದು, ಇನ್ನೊಬ್ಬನು ಸುಳ್ಳು ಹೇಳಿ ಏನೊ ಒಂದು ತಂದುಕೊಳ್ಳಬಹುದು. ನಾಲ್ಕನೆ ವಿಧದವನು ಮೋಸ, ಕಳ್ಳತನ, ಸುಳ್ಳು, ಇಲ್ಲದಂತೆ ಕೇಳಿ ಏನಾದರೂ

ತಂದುಕೊಳ್ಳಬಹುದು. ಆ ಊರಿನವರೆಲ್ಲರ ಸ್ವಭಾವಗಳನ್ನು ತಿಳಿದ ಧನಿಕನು, ಯಾವುದೊ ಒಂದು ವಿಧವಾಗಿ ನಷ್ಟಪಡಿಸುವ ಆ ಊರಿನವರು ತನ್ನ ಅನುಮತಿ ಇಲ್ಲದೆ ತನ್ನ ಬಳಿಗೆ ಬಾರದಂತೆ ಇರುವುದಕ್ಕೆ, ಒಬ್ಬ ಕಾವಲುಗಾರನನ್ನು ಇಟ್ಟುಕೊಳ್ಳಬೇಕೆಂದುಕೊಂಡನು. ಆಗ ಆ ಊರಿನವರು ಕಾವಲುಗಾರನನ್ನು ಲೆಕ್ಕ ಹಾಕದೆ, ಬಲವಂತವಾಗಿ ತನ್ನ ಮನೆಯೊಳಗೆ ಪ್ರವೇಶಿಸುವ ಸ್ವಭಾವವಿರುವ ವರೆಂದು ಗ್ರಹಿಸಿದ ಧನಿಕನು, ತನ್ನ ಅನುಮತಿಯಿಲ್ಲದೆ ಯಾರೂ ಒಳಗೆ ಬಾರದೆ ಇರುವುದಕ್ಕೆ ಆ ಊರಿನವರಿಗೆಲ್ಲರಿಗಿಂತ ಬಲವಾದ ವ್ಯಕ್ತಿಯನ್ನು, ಆ ಊರಿನವರೆಲ್ಲರ ಸ್ವಭಾವವನ್ನು ತಿಳಿದಿರುವ ವ್ಯಕ್ತಿಯನ್ನು, ನಾಲ್ಕು ವಿಧಗಳ ಕುತಂತ್ರಗಳಿಗೆ ಗುರುವಿನಂತಹ ವ್ಯಕ್ತಿಯನ್ನು, ನೋಡುವುದಕ್ಕೆ ಭಯಂಕರವಾಗಿ, ಬಲವಾಗಿರುವ ಮನುಷ್ಯನನ್ನು, ಎಲ್ಲರ ಮೀಸೆಗಳಿಗಿಂತ ದೊಡ್ಡ ಮೀಸೆಗಳಿರುವ ವ್ಯಕ್ತಿಯನ್ನು ಕಾವಲುಗಾರನನ್ನಾಗಿ ಇಟ್ಟುಕೊಂಡನು.

ಊರಿನ ಮಧ್ಯದಲ್ಲಿ ಮನೆ ಕಟ್ಟಿಕೊಂಡು ಸಂಸಾರ ಮಾಡುತ್ತಿದ್ದ ಧನಿಕನನ್ನು ಹೇಗಾದರೂ ಮೋಸ ಮಾಡಿ ಆತನ ಬಳಿಯಿರುವ ಧನವನ್ನು ಕದ್ದುಕೊಳ್ಳಬೇಕೆಂದು ಊರಿನಲ್ಲಿರುವವನು ಒಬ್ಬನು ಅಂದುಕೊಂಡರೆ, ಮತ್ತೊಬ್ಬನು ಹೇಗಾದರೂ ಮಾಡಿ ಆ ಮನೆಯಲ್ಲಿ ಕಳ್ಳತನ ಮಾಡಬೇಕೆಂದುಕೊಂಡನು, ಇನ್ನೊಬ್ಬನು ಸಿಹಿಯಾದ ಮಾತುಗಳನ್ನು ಅಸತ್ಯಗಳನ್ನಾಗಿ ಹೇಳಿ ಮೋಸಮಾಡಿ ಧನಿಕನ ಬಳಿಯಿಂದ ಧನವನ್ನು ತಂದುಕೊಳ್ಳಬಹುದೆಂದುಕೊಂಡನು. ನಾಲ್ಕನೆ ವಿಧದವನು "ಕೇಳದೆ ಹಳೆಯ ಅಮ್ಮನಾದರೂ ಇಡುವುದಿಲ್ಲ, ಕೇಳಿದರೆ ಹೊಸ ಅತ್ತೆಯಾದರೂ ಇಡುತ್ತಾಳೆಂಬ" ಗಾದೆಯನ್ನು ತಿಳಿದವನಾಗಿ ಧನಿಕನನ್ನು ಪದ್ಧತಿಯಿಂದ ಕೇಳಿ ದಾನದ ಕೆಳಗೆ ಏನಾದರೂ ಹೊಂದಬಹುದೆಂದುಕೊಂಡನು. ಹಾಗೆ ಅಂದುಕೊಂಡ ಆ ಊರಿನವರು ಒಬ್ಬೊಬ್ಬನಾಗಿ ಧನಿಕನ ಮನೆಗೆ ಅವರಿಗೆ ಅನುಕೂಲವಾದ ಸಮಯಗಳಲ್ಲಿ ಹೋದರು. ಆದರೆ ಅಲ್ಲಿ ಕಾವಲು ಕಾಯುತ್ತಿದ್ದ ವ್ಯಕ್ತಿ ಇವರೆಲ್ಲರ ಮೋಸಗಳನ್ನು ತಿಳಿದುಕೊಂಡಿರುವ ದೊಡ್ಡ ಮೋಸಗಾರ ಆಗಿರುವುದರಿಂದ, ಯಾರು ಯಾವ ಉದ್ದೇಶದಿಂದ ಬಂದಿದ್ದಾರೊ

ಮೊದಲೆ ಗ್ರಹಿಸಿ ಆ ಪಕ್ಕಕ್ಕೂ ಸಹ ಬರಲು ಬಿಡುತ್ತಿರಲಿಲ್ಲ. ಯಾವನು ಎಷ್ಟು ಉಪಾಯಗಳು ಮಾಡಿದರೂ ಅವು ಯಾವುವು ಕೆಲಸ ಮಾಡಲಿಲ್ಲ. ಮುಖ್ಯವಾಗಿ ಕಾವಲುಗಾರನನ್ನು ಪರಿಚಯ ಮಾಡಿಕೊಂಡರೆ ಕೆಲಸ ಸುಲಭವಾಗುತ್ತದೆಂದು ತಿಳಿದು, ಕೆಲವರು ಕಾವಲುಗಾರನನ್ನು ಪರಿಚಯ ಮಾಡಿಕೊಂಡರು. ಹೇಗಾದರೇನು ಕಾವಲುಗಾರನ ಹತ್ತಿರಕ್ಕೆ ಹೋದರು. ಆ ಮನೆಯ ಪ್ರಹರಿಯೊಳಗೆ ಹೋಗಿ ವಾಚ್‌ಮ್ಯಾನ್‌ನೊಂದಿಗೆ ಮಾತನಾಡಿದರು, ಆತನೊಂದಿಗೆ ಸ್ನೇಹ ಮಾಡಿದರು. ಅಲ್ಲಿನ ವಾಚ್‌ಮ್ಯಾನ್ (ಕಾವಲುಗಾರ) ಎಲ್ಲಾ ವಿದ್ಯೆಗಳಲ್ಲಿ ನಿಪುಣನಾಗಿದ್ದರಿಂದ, ಆತನ ಬಳಿಗೆ ಹೋದ ಪ್ರತಿಯೊಬ್ಬನನ್ನು, ಪ್ರತಿಬಾರಿ ಆತನೆ ಮೋಸಮಾಡಿ ಕಳುಹಿಸುತ್ತಿದ್ದನು. ಕಾವಲುಗಾರನ ಹತ್ತಿರಕ್ಕೆ ಹೋಗಿ ಏನೊ ಒಂದು ಕಳೆದುಕೊಂಡು ಬಂದಿರುವವರೆ ವಿನಹಃ ಆ ಮನೆಯೊಳಗೆ ಹೋದವರು ಇಲ್ಲ. ಆ ಧನಿಕನನ್ನು ನೋಡಿದವರು ಇಲ್ಲ. ಒಟ್ನಲ್ಲಿ ಆ ಮನೆಯ ಪ್ರಹರಿ ನೊಳಗೆ ಹೋದ ಪ್ರತಿಯೊಬ್ಬನು ಕಾವಲುಗಾರನ ಹತ್ತಿರ ಮೋಸಹೋಗಿ ಬಂದಿರುವವನೇ ಹೊರತು, ಮನೆಯೊಳಗೆ ಹೋದವನು ಯಾವನೂ ಇಲ್ಲ.

ಆ ಊರಿನವರೆಲ್ಲರೂ ಹಾಗೆ ಅನೇಕ ಬಾರಿ ಪ್ರಯತ್ನ ಮಾಡಿ ಕೈಲಾಗದೆ ಬಿಟ್ಟಿದ್ದರು. ಆಗ ನಾಲ್ಕನೆ ವಿಧದವನು ಕೇಳದೆ ಅಮ್ಮನಾದರೂ ಇಡುವುದಿಲ್ಲ ಎನ್ನುವ ಗಾದೆಯನ್ನು ತಿಳಿದವನಾಗಿ, ಒಳಗೆ ಹೋಗಬೇಕೆಂದರೆ ಏನು ಮಾಡಬೇಕೆಂದು ಕಾವಲುಗಾರನನ್ನು ಕೇಳಿದನು. ಅದಕ್ಕೆ ಕಾವಲುಗಾರ ಒಳಗಿರುವ ತನ್ನ ಯಜಮಾನನ ಅನುಮತಿ ಬೇಕೆಂದನು. ಅದಕ್ಕೆ ಆತನ ಅನುಮತಿ ಹೇಗೆ ಪಡೆಯಬೇಕೆಂದು ಅಲ್ಲಿಗೆ ಹೋದ ನಾಲ್ಕನೆ ವಿಧದವನು ಕೇಳುತ್ತಾನೆ. ಆಗ ವ್ಯಾಚ್‌ಮ್ಯಾನ್ (ಕಾವಲುಗಾರ) ಅದಕ್ಕೆ ಸರಿಯಾದ ಉಪಾಯವನ್ನು ವಿವರವಾಗಿ ಆತನಿಗೆ ಹೇಳುವುದನ್ನು ಪ್ರಾರಂಭಿಸಿದನು. ಅನುಮತಿಯನ್ನು ಹೇಗೆ ಪಡೆಯಬೇಕೆನ್ನುವುದಕ್ಕಿಂತ ಮೊದಲು ಅನುಮತಿ ಎಂದರೆ ಏನೊ ತಿಳಿದುಕೊಳ್ಳಬೇಕು. ಆದ್ದರಿಂದ ಮೊದಲು ಅದನ್ನು ಕುರಿತು ಹೇಳುತ್ತೇನೆ ಕೇಳು. ಯಾರ ಅನುಮತಿ ಪಡೆಯಬೇಕೆಂದುಕೊಳ್ಳುತ್ತೀಯೊ, ಅವನ ಮತಿಯನ್ನು ಅನುಸರಿಸಿ ಪ್ರವರ್ತಿಸುವುದರಿಂದಲೆ ಅವನ ಅನುಮತಿಯನ್ನು ಪಡೆಯುವುದು

ಎನ್ನುತ್ತೇವೆ. ಈ ಸೂತ್ರದ ಪ್ರಕಾರ ಧನಿಕನಾದ ಯಜಮಾನನ ಮತಿ ಹೇಗಿರುತ್ತದೊ ಹಾಗೇ ನೀನು ನಡೆದುಕೊಂಡರೆ ಆತನ ಅನುಮತಿ ದೊರಕಿದಂತೆ. ನಮ್ಮ ಯಜಮಾನ ಮೊದಲೆ ನನಗೆ ಈ ವಿಧವಾಗಿ ಹೇಳಿದ್ದಾನೆ. "ಯಾವನು ನನ್ನನ್ನು ನೋಡಬೇಕೆಂದು, ನನ್ನ ಬಳಿಗೆ ಬರಬೇಕೆಂದುಕೊಳ್ಳುತ್ತಿದ್ದಾನೊ ಅವನು ನನ್ನ ಹಾಗೆ ಸುಮ್ಮನೆ ಇರುವಂತವನಾಗಿರಬೇಕು. ಊರಿನವರ ಹಾಗೆ ಮೋಸ, ಕಳ್ಳತನ, ಸುಳ್ಳು, ಕೇಳಿ ತೆಗೆದುಕೊಳ್ಳುವುದು ಎನ್ನುವ ಯಾವ ವಿಧವಾದ ಅಭ್ಯಾಸಗಳು ಇಲ್ಲದಂತಿರಬೇಕು. ಅಂತವನು ನಿನಗೆ ಕಾಣಿಸಿದರೆ, ಅವನು ಯಾವ ಲಾಭ ಇಲ್ಲದಂತೆ ನನ್ನ ಬಳಿಗೆ ಬರಬೇಕೆನ್ನುವ ಉದ್ದೇಶದಿಂದ ಬಂದರೆ, ನನ್ನನ್ನು ಕೇಳದೆ ಒಳಗಡೆ ನನ್ನ ಬಳಿಗೆ ಕಳುಹಿಸು" ಎಂದು ಹೇಳಿದ್ದಾನೆ. ಯಾವನ ಮತಿ ಅವನದು ಎನ್ನುವಂತೆ ಮನುಷ್ಯರು ತಮ್ಮೊಳಗಿರುವ ಗುಣ ಚಕ್ರವನ್ನು ಅನುಸರಿಸಿ ನಾಲ್ಕು ವಿಧಗಳಾಗಿ ವಿಭಜಿಸಲ್ಪಟ್ಟಿದ್ದಾರೆಂದು ಗೀತೆಯಲ್ಲಿ ದೇವರೇ ಹೇಳಿದ್ದಾನೆ. ಆದ್ದರಿಂದ ಮೇಲೆ ನಾವು ಹೇಳಿಕೊಂಡ ಕಥೆಗು, ಭಗವದ್ಗೀತೆಯಲ್ಲಿ ದೇವರು ಹೇಳಿರುವುದಕ್ಕೂ ಹತ್ತಿರ ಸಂಬಂಧವಿರುವಂತೆ ಅರ್ಥವಾಗುತ್ತಿದೆ. ಈಗ ಅದನ್ನು ವಿವರವಾಗಿ ಹೇಳಿಕೊಳ್ಳೋಣ.

ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 13ನೇ ಶ್ಲೋಕದಲ್ಲಿ ದೇವರು ಊರಿನಲ್ಲಿನ ನಾಲ್ಕು ವಿಧಗಳ ಮನುಷ್ಯರಿಗೆ ಸರಿಹೋಗುವ ಭಾವವನ್ನು ಹೇಳಿದ್ದಾನೆ.

**ಜ್ಞಾನಯೋಗ (13) ಶ್ಲೋ॥**

**ಶ್ಲೋ॥** ***ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ।***
***ತಸ್ಯಕರ್ತಾರ ಮಪಿ ಮಾಂ ವಿದ್ಧ್ಯಕರ್ತಾರ ಮವ್ಯಯಮ್॥***

**ಭಾವಾರ್ಥ :–** ನಾಲ್ಕು ವಿಧಗಳ ಮನುಷ್ಯರನ್ನು ಅವರವರ ಕರ್ಮಗಳನ್ನು, ಗುಣಗಳನ್ನು ಅನುಸರಿಸಿ ಸೃಷ್ಠಿಸಿದ್ದೇನೆ. ನಾಶವಿಲ್ಲದ ನಾನು ಅವರಿಗೆ ಕರ್ತನಾದರೂ ಅಲ್ಲವೆನ್ನುವಂತಿದ್ದೇನೆ ಎಂದಿದ್ದಾನೆ. ಈಗ ಶ್ಲೋಕದಲ್ಲಿನ ಮೊದಲ

ವಾಕ್ಯದ ಪ್ರಕಾರ ವಿಶ್ವ ಎನ್ನುವ ಊರಿನಲ್ಲಿ ನಾಲ್ಕು ವಿಧಗಳ ಮನುಷ್ಯರನ್ನು ದೇವರು ತಯಾರು ಮಾಡಿಟ್ಟಿದ್ದಾನೆಂದು ತಿಳಿಯುತ್ತದೆ. ಆ ನಾಲ್ವರನ್ನು ಕ್ರಮವಾಗಿ ಒಬ್ಬನು ತಾಮಸನು, ಎರಡು ರಾಜಸನು, ಮೂರು ಸಾತ್ವಿಕನು, ನಾಲ್ಕು ಯೋಗಿ ಎಂದು ಹೇಳಬಹುದು. ಈ ನಾಲ್ವರಿಗೆ ಅಧಿಕನಾದ ಧನವಂತನಾದ ದೇವರು ವಿಶ್ವವೆನ್ನುವ ಊರಿನಲ್ಲಿ ಮೋಕ್ಷವೆನ್ನುವ ಮನೆಯಲ್ಲಿ ಇದ್ದಾನೆಂದು ತಿಳಿಯುತ್ತದೆ. ಮೋಕ್ಷವೆನ್ನುವ ಮನೆಯೊಳಗೆ ಧನಿಕನ ಬಳಿಗೆ ಹೋಗಬೇಕೆಂದುಕೊಂಡವರಿಗೆ, ಆ ಮನೆಯೊಳಗೆ ಹೋಗಿ ಏನೊ ಒಂದು ತಂದುಕೊಳ್ಳಬೇಕೆನ್ನುವವರಿಗೆ, ಅಡಚಣೆಯಾಗಿ ಯಾರನ್ನು ಮೋಕ್ಷವೆನ್ನುವ ಮನೆಯೊಳಗೆ ಹೋಗದಂತೆ ಕಾವಲಾಗಿ ಮನೆಯ ಯಜಮಾನನಂತೆ ಮೋಕ್ಷಾಧಿಪತಿಯಾದ ದೇವರು ಮಾಯೆ ಎನ್ನುವ ವಾಚ್‌ಮ್ಯಾನ್‌ನನ್ನು ಮನೆಯ ಮುಂದೆಯೇ ಇಟ್ಟಿದ್ದಾನೆ.

**ವಿಜ್ಞಾನಯೋಗ (14) ಶ್ಲೋ॥**

**ಶ್ಲೋ॥** ***ದೈವೀಷ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ।***
***ಮಾಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿ ತೇ॥***

ಈ ಶ್ಲೋಕದಲ್ಲಿ ಗುಣಗಳಿಂದ ಕೂಡಿಕೊಂಡ ಮಾಯೆ ಎನ್ನುವ ಶಕ್ತಿಯನ್ನು, ದೇವರೇ ತಯಾರು ಮಾಡಿಟ್ಟಿದ್ದಾನೆಂದು ತಿಳಿಯುತ್ತದೆ. ಅಷ್ಟೇ ಅಲ್ಲದೆ ದೇವರು ನಿಯಮಿಸಿದ ಮಾಯೆಯನ್ನು ದಾಟಿ ಯಾರೂ ಬರಲಾರನೆಂದು ಹೇಳಿದ್ದಾನೆ. ಅಂತಹ ದುಸ್ಸಾಧ್ಯವಾದ ಮಾಯೆಯನ್ನು ದಾಟುವುದಕ್ಕೆ ತನ್ನನ್ನು ಯಾರು ಆರಾಧಿಸುತ್ತಿದ್ದಾನೊ, ಅವನು ಮಾತ್ರ ಮಾಯೆಯನ್ನು ದಾಟಿ ಬರುವನೆಂದು ಹೇಳಿದ್ದಾನೆ. ಇದನ್ನು ಅನುಸರಿಸಿ ನೋಡಿದರೆ ಗುಣಗಳಿರುವ, ಗುಣಗಳಿಲ್ಲದ ನಾಲ್ಕು ವಿಧಗಳ ಮನುಷ್ಯರಲ್ಲಿ ದೇವರ ಬಳಿಗೆ ಮೋಕ್ಷವೆನ್ನುವ ಮನೆಯೊಳಗೆ ಹೋಗಬೇಕೆಂದುಕೊಂಡರೆ, ಗುಣಗಳೆಲ್ಲ ಬೆರೆತುಕೊಂಡಿರುವ ಮಾಯೆ ಅಡ್ಡವಾಗಿದ್ದು, ಯಾರನ್ನು ಒಳಗೆ ದೇವರ ಬಳಿಗೆ ಹೋಗದಂತೆ ಮಾಡುತ್ತಿದೆ. ದೇವರ ಇಷ್ಟ ಪ್ರಕಾರವಿದ್ದೂ, ದೇವರ ಆರಾಧನೆಗಳಾದ ಯೋಗಗಳನ್ನು ಆಚರಿಸುವವನನ್ನು ಮಾತ್ರ, ಮಾಯೆ ಆತಂಕವಿಲ್ಲದೆ

ಕಳುಹಿಸುವುದೆಂದು ತಿಳಿಯುತ್ತದೆ. ಈಗ ಮೇಲಿನ ಕಥೆ ದೇವರು ಹೇಳಿದ ಪದ್ಧತಿ ಪ್ರಕಾರ ಸಮಾನವಾಗಿ ಇರುವಂತೆ ತಿಳಿದು ಹೋಯಿತು. ಆ ಕಥೆಯಲ್ಲಿ ನಾಲ್ಕನೆ ವಿಧದವನು ಒಳಗಿನ ಯಜಮಾನನ ಮತಿಯನ್ನು ಅನುಸರಿಸಿ ನಡೆದುಕೊಳ್ಳುವುದನ್ನು ಪ್ರಾರಂಭಿಸಿದನು. ಅದನ್ನು ಗಮನಿಸಿದ ವಾಚ್‌ಮ್ಯಾನ್ ಆ ವ್ಯಕ್ತಿಯನ್ನು ಒಳಗೆ ಹೋಗುವುದಕ್ಕೆ ಆತಂಕ ಮಾಡದಂತೆ ಕಳುಹಿಸಿದನು. ಯಜಮಾನನ ಪದ್ಧತಿಯನ್ನು ಅನುಸರಿಸಿದವನನ್ನು ಕೇಳದಂತೆ ಸ್ವತಃವಾಗಿ ಒಳಗೆ ಕಳುಹಿಸುವ ಅಧಿಕಾರ ಕಾವಲುಗಾರನಿಗೆ ಇದೆ. ಆದ್ದರಿಂದ ನಾಲ್ಕನೇ ವಿಧದ ಮನುಷ್ಯನನ್ನು ಮನೆಯೊಳಗೆ ಕಳುಹಿಸಿದನು. ಅವನು ಹೋಗಿ ಒಳಗೆ ಯಜಮಾನನನ್ನು ಭೇಟಿಯಾಗಿ ಮಾತನಾಡಿದನು. ಆಗ ಆ ಯಜಮಾನ ಒಳಗೆ ಹೋದವನನ್ನು ಮನೆಯ ಯಜಮಾನನಂತೆ ಮಾಡಿ ತಾನು ಇಲ್ಲದಂತೆ ಹೋದನು.

ಊರಿನ ನಡುವೆ ಧನಿಕ ಯಜಮಾನನ ಬಳಿಗೆ ವಾಚ್‌ಮ್ಯಾನ್ ಕಳುಹಿಸಿದ ವ್ಯಕ್ತಿ ತಿರುಗಿ ಹೊರಗೆ ಬರಲಿಲ್ಲ. ಏಕೆ ಹಾಗೆ ಆಗಿದೆ? ಒಳಗೆ ಏನು ನಡೆದಿದೆ? ಎನ್ನುವ ಪ್ರಶ್ನೆಗಳಿಗೆ ಉತ್ತರವನ್ನು ನೋಡಿದರೆ, ಇಲ್ಲಿಯವರೆಗು ಒಳಗೆ ಧನಿಕನಿದ್ದಾನೆಂದುಕೊಂಡಿದ್ದೇವಲ್ಲವೆ! ಆದರೆ ಅಲ್ಲಿಗೆ ಹೋದ ವ್ಯಕ್ತಿಗೆ ಒಳಗೆ ಯಾವ ಮನುಷ್ಯನಿಲ್ಲವೆಂದು ತಿಳಿಯಿತು. ಅಲ್ಲಿ ಮನೆ ವಾಸ್ತವವೆ, ಆ ಮನೆಯಲ್ಲಿ ಧನವೂ ವಾಸ್ತವವೆ. ಮನೆಯಲ್ಲಿನ ಮನುಷ್ಯ ಮಾತ್ರ ವಾಸ್ತವವಲ್ಲ. ಮೊದಲು ಆ ಮನೆಯೊಳಗೆ ಹೋದರೂ ಕೇಳಿ ತೆಗೆದುಕೊಳ್ಳುವ ವ್ಯಕ್ತಿಗೆ ಮನುಷ್ಯನೆ ಕಾಣಿಸಲಿಲ್ಲ. ಹೋದ ವ್ಯಕ್ತಿ ಮನೆಯೆಲ್ಲ ತಿರುಗಿ ನೋಡಿದನು. ಆಗ ಮನೆಯೊಳಗಿನ ವ್ಯಕ್ತಿ ಎಲ್ಲಿಗೆ ಹೋಗಿದ್ದಾನೆ? ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾನೆ. ಹಾಗೆ ಅಂದುಕೊಂಡ ತಕ್ಷಣವೆ ಉತ್ತರವಾಗಿ "ನಾನೆಲ್ಲಿಗೆ ಹೋಗುತ್ತೇನೆ? ಒಂದುಕಡೆ ಇರುವವನಾದರೆ ಎಲ್ಲಿಗಾದರೂ ಇನ್ನೊಂದು ಜಾಗಕ್ಕೆ ಹೋಗಬೇಕಾಗಿರುತ್ತದೆ. ನಾನು ಎಲ್ಲಾಕಡೆ ಇದ್ದೇನೆ. ನೀನು ಮನೆಯೆಲ್ಲಾ ತಿರುಗಿ ನೋಡಿದ್ದೀಯ. ನಿನಗೆ ನಾನು ಕಾಣಿಸುವುದಕ್ಕೆ ನಿನ್ನ ಹಾಗೆ ನಾನು

ಒಬ್ಬ ವ್ಯಕ್ತಿಯಲ್ಲ, ಎಲ್ಲಾ ಕಡೆಯಿರುವ ಶಕ್ತಿ. ನೀನು ನನ್ನ ಮತಿಯನ್ನು ಅನುಸರಿಸಿ ನಡೆದುಕೊಂಡಿರುವುದರಿಂದ ಇಲ್ಲಿಗೆ ಬಂದಿದ್ದೀಯ. ಇಲ್ಲಿಗೆ ಬಂದು ಹೋಗಬೇಕೆಂದುಕೊಂಡಿದ್ದೀಯ, ಆದ್ದರಿಂದ ನಾನು ನಿನಗೆ ಕಾಣಿಸಲಿಲ್ಲ. ನಿನ್ನ ಒಳಗಿರುವ ತಿರುಗಿ ಹೋಗಬೇಕೆನ್ನುವ ಅಭಿಪ್ರಾಯವನ್ನು ಬಿಟ್ಟರೆ ನಾನು ನಿನಗೆ ಕಾಣಿಸುತ್ತೇನೆ" ಎಂದು ಕೇಳಿಸಿತು. ಆಗ ಒಳಗೆ ಹೋದ ವ್ಯಕ್ತಿ ತಿರುಗಿ ಹೋಗಬೇಕೆಂಬ ಅಭಿಪ್ರಾಯವನ್ನು ಬಿಟ್ಟನು. ಆಗ ಅಲ್ಲಿಯವರೆಗು ಮಾತನಾಡಿದ ವ್ಯಕ್ತಿ ಕಾಣಿಸಿದನು. ಕಾಣಿಸಿದ ವ್ಯಕ್ತಿಯ ಹೋಲಿಕೆ ಒಳಗೆ ಹೋದ ವ್ಯಕ್ತಿಯಂತೆ ಇದ್ದಾನೆ. ಆತನಿಗೂ ಈತನಿಗೂ ಸ್ವಲ್ಪವಾದರೂ ಯಾವ ವಿಧವಾದ ವ್ಯತ್ಯಾಸವೂ ಇಲ್ಲ. ಆಗ ಕಾಣಿಸಿದ ವ್ಯಕ್ತಿ ಹೀಗೆ ಹೇಳಿದನು "ಈಗ ನೀನು ನ್ನನಹಾಗೆ ಯಾವ ಭಾವನೆಗಳು ಇಲ್ಲದಂತೆ ಇದ್ದೀಯ ಆದ್ದರಿಂದ ಇಬ್ಬರು ಒಂದೇ. ನಿನ್ನ ಹಾಗೆ ನಾನು, ನನ್ನ ಹಾಗೆ ನೀನು ಇದ್ದೀಯ. ಇಬ್ಬರ ರೂಪ ಒಂದೇ ಆಗಿದೆ. ಈ ಮನೆಯಲ್ಲಿ ಯಜಮಾನ ಒಬ್ಬನೇ ಇರುತ್ತಾನೆ. ಇಬ್ಬರು ಎಂದಿಗೂ ಇರುವುದಿಲ್ಲ. ಈಗಿನಿಂದ ನನ್ನ ಸ್ಥಾನದಲ್ಲಿ ಮನೆ ಯಜಮಾನನಂತೆ ನೀನೇ ಇರು." ಎಂದು ಹೇಳಿ ಇಬ್ಬರೂ ಒಬ್ಬರೊಳಗೆ ಒಬ್ಬರು ಸೇರಿ ಹೋದರು.

ಇದೆಲ್ಲವೂ ಸಿನಿಮಾ ಕಥೆಯಂತೆ ಇದ್ದರೂ ಪ್ರಯತ್ನಿಸಿದರೆ ನಮ್ಮ ಜೀವನದಲ್ಲಿ ನಡೆಯುವ ಸತ್ಯ. ಮನೆಯೊಳಗೆ ಹೋದವನು ಮನೆಗೆ ಯಜಮಾನ ಆದಂತೆ ಮೋಕ್ಷವೆನ್ನುವ ಮನೆಯೊಳಗೆ ಮಾಯೆಯನ್ನು ಒಪ್ಪಿಸಿ ಹೋದರೆ ವಿಶ್ವಕ್ಕೆ ಅಧಿಪತಿಯಾಗಬಹುದು. ದೇವರಿಗೆ ಆಕಾರವಿಲ್ಲ. ಆದ್ದರಿಂದ ಮೋಕ್ಷವೆಂಬ ಮನೆಯೊಳಗೆ ಹೋದರೆ ಆಕಾರವಿಲ್ಲದ ಯಜಮಾನನಾದ ದೇವರೊಂದಿಗೆ ಬೆರೆತುಹೋಗಿ, ತಾನು ಸಹ ದೇವರಾಗಿ ಬದಲಾಗಿ ವಿಶ್ವಕ್ಕೆಲ್ಲಾ ಅಧಿಪತಿಯಾಗ ಬಹುದು. ಅಲ್ಲಿಗೆ ಮನುಷ್ಯನ ಮಾನವತ್ವ ಹೋಗಿ ದೈವತ್ವ ಉಂಟಾಗುತ್ತದೆ. ದೈವತ್ವ ಹೊಂದಿದವನು ತಿರುಗಿ ಹುಟ್ಟುವುದಿಲ್ಲ. ಇದೆಲ್ಲವೂ ದೇವರು ಹೇಳಿದ ವಿಧಾನ, ಆತನು ಏರ್ಪಡಿಸಿದ ಕಾನೂನು. ಒಬ್ಬ ಮನುಷ್ಯ ತಿರುಗಿ ಹುಟ್ಟದಂತೆ ದೇವರಾಗಿ ಬದಲಾಗಬೇಕೆಂದರೆ, ಜನ್ಮಗಳು ಇಲ್ಲದಂತೆ ವಿಶ್ವಕ್ಕೆ ಅಧಿಪತಿಯಾಗಿ

ಇರಬೇಕೆಂದರೆ ಇದೇ ಮನುಷ್ಯನಿಗೆ ದೇವರು ಶಾಸ್ತ್ರಬದ್ಧವಾಗಿ ಹೇಳಿದ ವಿಧಾನ. ದೇವರು ಹೇಳಿದ ವಿಧಾನವನ್ನು ಹೋಲಿಸಿ ನೋಡಿದರೆ ಇದಕ್ಕೂ ಮೊದಲು ಹೇಳಿಕೊಂಡ ಕಥೆಯಂತೆ ಇರುತ್ತದೆ. ಇದು ಒಂದು ಹಿಂದೂಮತಕ್ಕೆ ಸಂಬಂಧಿಸಿರುವುದೆಂದು ಯಾರೂ ಅಂದುಕೊಳ್ಳಬಾರದು. ಊರಿನಲ್ಲಿ ಯಾವ ಕುಲದವರಾದರೂ ಇರಬಹುದು. ಹಾಗೆ ವಿಶ್ವವೆನ್ನುವ ಊರಿನಲ್ಲಿ ಯಾವ ಮತದವರಾದರೂ ಇರಬಹುದು. ಊರಿನ ಮಧ್ಯದಲ್ಲಿರುವ ಮನೆಯೊಳಗೆ ಹೋಗಬೇಕೆಂಬ ಪ್ರಯತ್ನ ಯಾವ ಕುಲದವರಾದರೂ ಮಾಡಬಹುದು. ಅಷ್ಟೇಯಾಗಲಿ ಇಂತಹ ಕುಲದವರಿಗೆ ಪ್ರವೇಶ ಎಂದು ಹೇಳಲಿಲ್ಲ. ಅದೇ ರೀತಿ ಮೋಕ್ಷವೆಂಬ ಮನೆಯೊಳಗೆ ಎಲ್ಲಾ ಮತದವರಿಗು ಪ್ರವೇಶವಿದೆ. ಅದೂ ವಾಚ್‌ಮ್ಯಾನ್ ಒಪ್ಪಿಕೊಂಡರೆ. ಅಷ್ಟೇ ಹೊರತು ಇಂತಹ ಮತದವರೇ ಅಲ್ಲಿಗೆ ಹೋಗಬಹುದು ಎಂದು ಹೇಳಿಲ್ಲ ಅಲ್ಲವೆ! ವಾಚ್‌ಮ್ಯಾನ್ ಎಲ್ಲರಿಗು ಆತಂಕವನ್ನುಂಟುಮಾಡಿ ಮನೆಯೊಳಗೆ ಯಾರನ್ನೂ ಬಿಡುವುದಿಲ್ಲ ವೆಂಬಂತೆ ಮಾಯೆ, ಸಾತಾನ್, ಇಬ್ಲೀಸ್ ಎನ್ನುವ ಹೆಸರುಗಳಿರುವ ವಾಚ್‌ಮ್ಯಾನ್ ದೇವರ ಹತ್ತಿರಕ್ಕೆ ಯಾರನ್ನೂ ಹೋಗದಂತೆ ಮಾಡುತ್ತಿದ್ದಾನೆ. ಎಲ್ಲ ಮತದವರನ್ನು, ಎಲ್ಲ ವಿಧಗಳ ಹೆಸರುಗಳಿಂದ ದೇವರ ಬಳಿಗೆ ಹೋಗಬೇಕೆಂದುಕೊಂಡವರನ್ನು ಹೋಗದಂತೆ ನಿಲ್ಲಿಸುತ್ತಾನೆ. ಮನುಷ್ಯನಾದ ಪ್ರತಿಯೊಬ್ಬನಿಗೂ ಕಥೆಯಂತೆ ಅನ್ವಯಿಸುವ ಒಂದು ಶಾಸ್ತ್ರಬದ್ಧವಾದ ವಿಧಾನವನ್ನು ದೇವರು ಅಳವಡಿಸಿ ಇಟ್ಟಿದ್ದಾನೆ. ಮಾಯೆ ಎನ್ನುವುದು ದೇವರು ಹೇಳಿದ ವಿಧಾನದ ಪ್ರಕಾರ ನಡೆಯುವವನಿಗೆ ಅನುಕೂಲಿಸಿ ಆತಂಕ ಪಡಿಸುವುದಿಲ್ಲ. ಆದರೆ ದೇವರ ವಿಧಾನದ ಪ್ರಕಾರ ನಡೆಯದವನನ್ನು ದೇವರ ಬಳಿಗೆ ಹೋಗದಂತೆ, ಮೋಕ್ಷವೆನ್ನುವ ಗೃಹದೊಳಗೆ ಹೋಗದಂತೆ ನೋಡುತ್ತದೆ. ಯಾವ ಮತಸ್ಥನಿಗಾದರೂ ಗುಣಚಕ್ರ ನಾಲ್ಕು ಭಾಗಗಳಾಗಿ ಇದೆ. ಎಲ್ಲ ವಿಧದವರಿಗೂ ಮೂರು ವಿಧಗಳ ಗುಣಗಳು ಇವೆ. ಆದ್ದರಿಂದ ಎಲ್ಲ ಮತದವರಿಗೂ ದೇವರ ವಿಧಾನ ಒಂದೇಯೆಂದು ತಿಳಿಯುತ್ತದೆ.

ಪವಿತ್ರ ಖುರಾನ್ ಗ್ರಂಥದಲ್ಲಾಗಲಿ, ಪರಿಶುದ್ಧ ಬೈಬಲ್ ಗ್ರಂಥದಲ್ಲಾಗಲಿ, ಪರಮ, ಪವಿತ್ರ ಪರಿಶುದ್ಧ ಭಗವದ್ಗೀತೆಯಲ್ಲಾಗಲಿ ತಿಳಿಸಲಾದ ದೇವರ ಧರ್ಮಗಳೆಲ್ಲವೂ ಒಂದೇ ವಿಧವಾಗಿವೆ. ಊರು, ಮನೆ ಕಥೆಯಂತೆ ಎಲ್ಲ ಮತದವರೂ ದೇವರನ್ನು ಸೇರುವುದಕ್ಕೆ ಒಂದೇ ಪದ್ಧತಿಯನ್ನು ಅನುಸರಿಸಬೇಕಾಗಿರುತ್ತದೆ. ಮೂರು ಮತಗಳ ಮೂಲ ಗ್ರಂಥಗಳಲ್ಲಿ ನನಗೆ ಒಂದೇ ಧರ್ಮ ಕಾಣಿಸುತ್ತಿದೆ. ಎಲ್ಲ ಮತಗಳಿಗು ಒಂದೇ ದೇವರು, ಎಲ್ಲ ಮತಗಳಿಗು ಒಂದೇ ಜ್ಞಾನ, ಎಲ್ಲರಿಗೂ ಸೃಷ್ಠಿಕರ್ತ ಒಬ್ಬನೇ ಎಂದು ನಾವು ಹೇಳಿದರೆ ಕೆಲವರು ಹೀಗೆ ಕೇಳಿದ್ದಾರೆ. “ನಿಮ್ಮ ಮತದಲ್ಲಿ ಪುನರ್ಜನ್ಮ ಗಳಿವೆಯೆಂದು ಹೇಳಿದ್ದೀರ. ನಮ್ಮ ಮತದಲ್ಲಿ ಪುನರ್ಜನ್ಮಗಳು ಇಲ್ಲವೆಂದು ಹೇಳಿದ್ದಾರೆ. ಹಾಗಿರುವಾಗ ಎರಡು ಮತಗಳ ಜ್ಞಾನ ಒಂದೇ ಹೇಗೆ ಆಗುತ್ತದೆ? ನಿಮ್ಮ ಗ್ರಂಥದಲ್ಲಿ ಹೇಳಿರುವುದಕ್ಕೂ, ನಮ್ಮ ಗ್ರಂಥದಲ್ಲಿ ಹೇಳಿರುವುದಕ್ಕೂ ಎಷ್ಟೋ ವಿಷಯಗಳಲ್ಲಿ ವ್ಯತ್ಯಾಸಗಳು ಕಾಣಿಸುತ್ತಿವೆ. ಹಾಗಿರುವಾಗ ಎಲ್ಲ ಮತಗಳಲ್ಲಿರುವುದು ಒಂದೇ ಧರ್ಮ ಹೇಗೆ ಆಗುತ್ತದೆ?” ಆಗ ಅವರಿಗೆ ನಾವು ಹೀಗೆ ಸಮಾಧಾನ ಹೇಳಿದೆವು. ಸೃಷ್ಠಿಕರ್ತ ಎಲ್ಲರಿಗೂ ಒಬ್ಬನೇಯೆಂದು ನೀವೇ ಒತ್ತಿ ಹೇಳುತ್ತಿದ್ದೀರ. ನಾವು ಅದಕ್ಕೆ ಒಪ್ಪಿಕೊಳ್ಳುತ್ತಿದ್ದೇವೆ. ಆದರೇ ನಾವು ಎಲ್ಲರಿಗೂ ಧರ್ಮ ಒಂದೇಯೆಂದು ಹೇಳುತ್ತಿದ್ದೇವೆ. ಅದಕ್ಕೆ ನೀವು ಒಪ್ಪಿಕೊಳ್ಳುತ್ತಿಲ್ಲ. ಎಲ್ಲರಿಗೂ ದೇವರು ಒಬ್ಬನೇ ಆಗಿರುವಾಗ ದೇವರ ಧರ್ಮ (ಇಂದೂಧರ್ಮ) ಎಲ್ಲರಿಗೂ ಒಂದಾಗಿ ಏಕಿಲ್ಲ? ಈ ವಿಷಯವನ್ನು ಆಳವಾಗಿ ಆಲೋಚಿಸಿದರೆ ಊರಿನಲ್ಲಿ ಧನಿಕನ ಮನೆ ಒಂದೇಯೆಂದು ನೀವೇ ಹೇಳಿ ಆ ಮನೆಗೆ ಕಾವಲುಗಾರರು ಬಹಳ ಜನ ಇದ್ದಾರೆನ್ನುವಂತಿದೆ. ಒಂದು ಮನೆಗೆ ಒಬ್ಬನೇ ಕಾವಲುಗಾರನಿರುವನು ಎನ್ನುವಂತೆ ದೇವರು ಒಬ್ಬನೇ, ಮಾಯೆ ಒಂದೇ, ಅಲ್ಲಿಗೆ ಹೋಗುವುದಕ್ಕೆ ಅನುಮತಿ ಒಂದೇ ಇರುತ್ತದೆ. ವಿವರವಾಗಿ ನೋಡಿದರೆ ಸತ್ಯ ತಿಳಿಯುವುದು. ಹಾಗಲ್ಲದೇ ನೀನು ಯೋಚಿಸದೆ, ಬೋಧಕನು ಹೇಳಿದ ಮಾತನ್ನು ಅನುಸರಿಸಿ ಎಂದಿಗೂ ಕುರುಡಾಗಿ ನಂಬಬೇಡ. ಗುರು ಹೇಳಿದ ಮಾತು ವಾಸ್ತವವಾಗುತ್ತದೆ. ಆದರೇ

ಬೋಧಕರು ಹೇಳಿದ ಮಾತು ವಾಸ್ತವವೆಂದು ನಂಬಬಾರದು. ಯಾವನು ಬೋಧಕನೋ, ಯಾವನು ಗುರುವೋ ತಿಳಿಯದ ಈ ಕಾಲದಲ್ಲಿ ಹೇಳಿರುವ ವನ್ನೆಲ್ಲಾ ಕೇಳು, ಕೇಳಿರುವವನ್ನೆಲ್ಲಾ ಯೋಚಿಸು, ಅದರಲ್ಲಿ ಯಾವುದು ಸತ್ಯವಾದರೇ ಅದನ್ನು ಸ್ವೀಕರಿಸು. ಹಾಗಲ್ಲದೇ ನಮ್ಮವರೆಲ್ಲರೂ ಹೇಳಿರುವುದನ್ನೇ ನಾನು ಹೇಳುತ್ತೇನೆಂದರೆ ಅದರಲ್ಲಿ ನಿನ್ನ ತಿಳುವಳಿಕೆ, ನಿನ್ನ ಯೋಚನೆ ಏನೂ ಇಲ್ಲವೆಂದೇ ಅರ್ಥ. ಹಾಗಲ್ಲದೇ ದೇವರು ನಿನಗೆ ಕೊಟ್ಟ ಬುದ್ಧಿಯಿಂದ ಒಂದು ಯೋಚನಾ ವಿಧಾನವನ್ನು ಅವಲಂಭಿಸಿ ಸತ್ಯವನ್ನು ತಿಳಿದುಕೋ, ಸತ್ಯವನ್ನೇ ಮಾತನಾಡು, ಆಗ ದೇವರು ಒಪ್ಪಿಕೊಳ್ಳುತ್ತಾನೆ.

ಐದು ಸಾವಿರ ವರ್ಷಗಳ ಪೂರ್ವದಲ್ಲಿ ದೇವರು ಭಗವದ್ಗೀತೆಯನ್ನು ಹೇಳಿದ್ದಾನೆ. ಅಲ್ಲಿ ಹೇಳಿದಂತೆ ಪ್ರತ್ಯಕ್ಷವಾಗಿ ನಡೆಯುತ್ತಿದೆ. "ಜಾತಸ್ಯ ಹಿ ಧ್ರೂವೋ ಮೃತ್ಯುದೃವಂ ಜನ್ಮ ಮೃತಸ್ಯಚ" ಎನ್ನುವ ವಾಕ್ಯದ ಪ್ರಕಾರ ಹುಟ್ಟಿದವನಿಗೆ ಸಾವು ತಪ್ಪುವುದಿಲ್ಲ. ಸತ್ತವನಿಗೆ ಹುಟ್ಟು ತಪ್ಪುವುದಿಲ್ಲವೆಂದು ಹೇಳಿರುವುದು ನಡೆದಿದೆ. ಅದರ ಪ್ರಕಾರ ಹುಟ್ಟಿದವನು ತಪ್ಪದೇ ಸತ್ತುಹೋಗುವಂತೆ ಎಲ್ಲರಿಗೂ ತಿಳಿಯುತ್ತಿದೆ. ಆದರೇ ಸತ್ತವನು ತಿರುಗಿ ಹುಟ್ಟುವುದು ಯಾರಿಗೂ ಕಾಣಿಸದ ವಿಷಯ. ಆದ್ದರಿಂದ ಕೆಲವರು ಆ ಮಾತನ್ನು ಒಪ್ಪಿಕೊಳ್ಳುವುದಿಲ್ಲ. ನಮ್ಮ ಮತ ಗ್ರಂಥಗಳಲ್ಲಿ ಸತ್ತವನು ಹುಟ್ಟುವುದಿಲ್ಲವೆಂದು ಬರೆದಿದ್ದಾರೆಂದು ಹೇಳುವರು. ಇಲ್ಲಿಯವರೆಗು ಯಾವ ಗ್ರಂಥದಲ್ಲಿಯೂ ಸತ್ತವನು ಹುಟ್ಟುವುದಿಲ್ಲವೆಂಬ ವಿಷಯವಿಲ್ಲ. ಅವನ ಕರ್ಮ ಪ್ರಕಾರ ತಿರುಗಿ ಹುಟ್ಟುತ್ತಾರೆಂದೇ ಬರೆದಿದ್ದಾರೆ. ಕೆಲವರು ಮತ ಹಿರಿಯರು ತಪ್ಪುದಾರಿ ಹಿಡಿದು ಹೋಗುವುದೇ ಅಲ್ಲದೇ, ಅವರ ತಪ್ಪನ್ನು ಮುಚ್ಚಿಕೊಳ್ಳುವುದಕ್ಕೆ ಉಳಿದವರಿಗೆಲ್ಲರಿಗೂ ಕಣ್ಣಿಗೆ ಬಟ್ಟೆ ಕಟ್ಟಿ ನಾವು ಹೇಳುವುದನ್ನು ಕೇಳಿರಿ, ನಾವು ಮಾಡುವುದು ಮಾಡಿರಿ ಎಂದು ಹೇಳುತ್ತಿರುವುದರಿಂದ, ಉಳಿದವರು ಸಹ ವಿಚಕ್ಷಣೆ ಇಲ್ಲದೇ ತಪ್ಪುದಾರಿ ಹಿಡಿದು ಹೋಗುವುದು ನಡೆಯುತ್ತಿದೆ. ದೇವರು ಮನುಷ್ಯರು ತಿಳಿದುಕೊಳ್ಳಬೇಕೆಂದು ತನ್ನ ಜ್ಞಾನವನ್ನು ಭೂಮಿಮೇಲೆಗೆ ಕಳುಹಿಸಿದರೆ ಮನುಷ್ಯ ತಿಳಿದುಕೊಳ್ಳದೇ

ತಪ್ಪಾಗಿ ಅರ್ಥ ಮಾಡಿಕೊಳ್ಳುತ್ತಿದ್ದಾನೆಂದುಕೊಂಡು, ಹಾಗಲ್ಲದೇ ತಾನು ಹೇಳಿದ ಜ್ಞಾನ ಶಾಸ್ತ್ರಬದ್ಧವಾದುದೆಂದು ತಿಳಿಯುವುದಕ್ಕೆ ಕೆಲವು ಸಾಕ್ಷ್ಯಾಧಾರಗಳನ್ನು ತೋರಿಸಿದ್ದಾನೆ. ಅದರಲ್ಲಿ ಕೆಲವು ಕಡೆ ಸತ್ತುಹೋದವನು ತಿರುಗಿ ಹುಟ್ಟುವನೆಂದು ತಿಳಿಯುವುದಕ್ಕೆ, ಕೆಲವರು ಹುಟ್ಟಿದ ನಾಲ್ಕು, ಐದು ವರ್ಷಗಳಿಗೆ ಹಿಂದಿನ ಜನ್ಮ ಜ್ಞಾಪಕಗಳು ಬಂದು ತಿರುಗಿ ಹೇಳಿರುವುದು ನಡೆದಿದೆ. ಅಂತಹ ಸಂಘಟನೆಗಳೆ ಪುನರ್ಜನ್ಮಕ್ಕೆ ಸಾಕ್ಷಿ. ಹಾಗೆ ಹೇಳುವುದು ಸುಳ್ಳಲ್ಲ ಎನ್ನುವುದಕ್ಕೆ ಕಳೆದ ಜನ್ಮದ ಜ್ಞಾಪಕಗಳು ಬಂದ ಬಾಲಕನು ಹೇಳಿದ ಪ್ರಕಾರ ಎಲ್ಲ ಇವೆಯೆಂದು ತಿಳಿಯುತ್ತಿದೆ. ಒಬ್ಬ ವ್ಯಕ್ತಿ ಸತ್ತುಹೋಗಿ ತಿರುಗಿ ಬೇರೊಂದು ಕಡೆ ಹುಟ್ಟುವುದು ನಡೆದಿದೆ. ಹಾಗೆ ಹುಟ್ಟಿದವನಿಗೆ ನಾಲ್ಕು ವರ್ಷಗಳ ವಯಸ್ಸಿನಲ್ಲಿ ಕಳೆದ ಜನ್ಮದ ಜ್ಞಾಪಕಗಳು ಬರುವುದು ನಡೆದಿದೆ. ಹಾಗೆ ಬಂದ ಜ್ಞಾಪಕಗಳನ್ನು ಆ ಹುಡುಗನು ದೊಡ್ಡವರಿಗೆ ಹೇಳಿದಾಗ, ಅವರು ಅವರ ಹುಡುಗ ಹೇಳಿರುವುದು ಸತ್ಯವೋ ಅಲ್ಲವೋ ಎಂದು ವಿಚಾರಿಸಿದಾಗ, ಹುಡುಗನು ಹೇಳಿರುವವೆಲ್ಲಾ ಆಧಾರಗಳಿಂದ ಸಹ ನಿರೂಪಣೆಯಾಗಿ ಸತ್ಯವೆಂದು ತಿಳಿದುಹೋಗಿವೆ. ಒಬ್ಬನು ಹಿಂದಿನ ಜನ್ಮದಲ್ಲಿ ಕಾರು ಅಪಘಾತದಲ್ಲಿ ಸತ್ತುಹೋದ ವಿಷಯ ಜ್ಞಾಪಕಬಂದು ಹೇಳಿದಾಗ, ಆತನು ಹೇಳಿದ ಸ್ಥಳವನ್ನು, ಆ ಕಾಲವನ್ನು, ಸತ್ತುಹೋದಾಗ ಕಳೆದ ಜನ್ಮದಲ್ಲಿದ್ದ ಬಂಧುಗಳನ್ನು ಕೇಳಿದಾಗ ಎಲ್ಲಾ ಸತ್ಯವೆಂದು ತಿಳಿದುಹೋಯಿತು. ಅಷ್ಟೆ ಅಲ್ಲದೇ ಹಿಂದಿನ ಜನ್ಮದಲ್ಲಿನ ಬಂಧುಗಳೆಲ್ಲರನ್ನು ಆ ಹುಡುಗನು ಗುರುತಿಸಿ ಹೆಸರಿನಿಂದ ಕರೆದಿರುವುದು ಸಹ ನಡೆದಿದೆ. ಮತ್ತೆ ಜನ್ಮ ಇದೆಯೆನ್ನುವುದಕ್ಕೆ ಇದು ದೇವರು ತೋರಿಸಿದ ಪ್ರತ್ಯಕ್ಷ ಸಾಕ್ಷಿಯಲ್ಲವೇ! ಇಂತಹ ಎಷ್ಟೋ ಸಂಘಟನೆಗಳು ಮುಸ್ಲಿಮ್ ದೇಶಗಳಲ್ಲಿಯೇ ನಡೆದಿವೆ. ಇವು ಮನುಷ್ಯರು ಸೃಷ್ಠಿಸಿರುವವು ಅಲ್ಲ! ದೇವರೇ ತೋರಿಸಿದ ಸಾಕ್ಷ್ಯಗಳಲ್ಲವೆ? ಇವೆಲ್ಲವೂ ನೋಡಿಯೂ ಸಹ, ತಮ್ಮ ಗ್ರಂಥದಲ್ಲಿ ದೇವರು ಜನ್ಮಗಳಿವೆಯೆಂದು ಹೇಳಿದ ವಾಕ್ಯಗಳಿಗೆ ತಪ್ಪು ಅರ್ಥವನ್ನು ಹೇಳಿ, ಜನ್ಮಗಳು ಇಲ್ಲ ಎಂದರೆ ದೇವರ ಮಾತಿಗೆ ವಿರುದ್ಧವಾಗಿ ಮಾತನಾಡಿದಂತೆ ಅಲ್ಲವೇ! ಹಾಗೆ ಮಾತನಾಡುವುದರಿಂದ

ದೇವರ ಜ್ಞಾನವನ್ನು ತಪ್ಪುದಾರಿ ಹಿಡಿಸಿದಂತಾಗುತ್ತದೆ. ಅದರಿಂದ ದೇವರ ಕೋಪವನ್ನು ದೂತರಿಂದ ಅನುಭವಿಸಬೇಕಾಗಿ ಬರುತ್ತದೆ.

ದೇವರು ಹೇಳಿರುವುದನ್ನು ಅರ್ಥ ಮಾಡಿಕೊಳ್ಳದೆ ಹೋಗುವುದೇ ಅಲ್ಲದೇ, ತಮಗೆ ಅನುಕೂಲವಾದ ಅಸತ್ಯವನ್ನು ಎಲ್ಲರಿಗೂ ಅಂಟಿಸುವುದು ಇಂತಹ ಮತಕ್ಕೇ ಪರಿಮಿತವಾದುದೆಂದು ಹೇಳುವುದಕ್ಕೆ ಅವಕಾಶವಿಲ್ಲ. ಎಲ್ಲ ಮತಗಳಲ್ಲಿಯೂ ದೇವರ ಜ್ಞಾನವನ್ನು ಬದಲಾಯಿಸಿ ಹೇಳುವುದು, ಇರುವುದು ಇಲ್ಲದಂತೆ ಇಲ್ಲದಿರುವುದು ಇದ್ದಂತೆ ಹೇಳುವುದೂ ಜಾಡ್ಯದಂತೆ ವ್ಯಾಪಿಸಿದೆ. ದೇವರ ಧರ್ಮವನ್ನು ಇಂದೂಧರ್ಮ ಅನ್ನಬೇಕೆಂದು ಹೇಳಿಕೊಂಡಿದ್ದೇವೆ. ಹಾಗೆ ಹೇಳುವುದಕ್ಕೆ ಕಾರಣವಿದೆ, ಆದ್ದರಿಂದ ಅದರ ಪ್ರಕಾರ ಹಾಗೆಯೇ ಹೇಳಬೇಕು. ದೇವರ ಜ್ಞಾನ ಹೇತುಬದ್ಧವಾದುದು ಮತ್ತು ಶಾಸ್ತ್ರಬದ್ಧವಾದುದು. ದೇವರ ಧರ್ಮಗಳಿಗೆ (ಇಂದೂ ಧರ್ಮಗಳಿಗೆ) ಹೇತುಬದ್ಧವಾದ ಪ್ರಶ್ನೆ ಇರುತ್ತದೆ, ಶಾಸ್ತ್ರಬದ್ಧವಾದ ಉತ್ತರ ಇರುತ್ತದೆ. ದೇವರ ಜ್ಞಾನ ನನಗೆ ತಿಳಿದಿದೆ ಎನ್ನುವವನು ಯಾರಾದರೂ, ಹೇತುವಾದಿ ಪದ್ಧತಿಯಾಗಿ ಕೇಳಿದ ಪ್ರಶ್ನೆಗೆ ಶಾಸ್ತ್ರಬದ್ಧವಾಗಿ ಉತ್ತರ ಕೊಡದೇ ಹೋದರೇ ದೇವರ ಜ್ಞಾನವನ್ನು ಅವಮಾನಿಸಿದಂತಾಗುವುದು. ಇದು ಒಂದು ಮತಕ್ಕೆ ಸಂಬಂಧಿಸಿರುವುದಲ್ಲ. ಎಲ್ಲ ಮತಗಳಿಗೂ ಸಂಬಂಧಿಸಿದ ವಿಷಯವೆಂದು ಹೇಳುತ್ತಿದ್ದೇವೆ. ದೇವರು ಒಂದು ಮತದವನಲ್ಲ. ಎಲ್ಲಮತಗಳ ಮನುಷ್ಯರಿಗೆ ಸಂಬಂಧಿಸಿದವನು. ಆದ್ದರಿಂದ ಒಂದು ಮತದಲ್ಲಿ ಲೋಪ ಕಾಣಿಸಿದರೆ, ಉಳಿದ ಮತಗಳಲ್ಲಿ ಅಂತಹ ಲೋಪ ಇಲ್ಲದಂತೆ ನೋಡಿ ಕೊಳ್ಳಬೇಕು. ಇಂದೂ ಧರ್ಮಗಳು (ದೇವರ ಧರ್ಮಗಳು) ಮಹಾ ಶಕ್ತಿವಂತ ವಾದವು. ಅವು ದೇವರ ವಿಧಾನವನ್ನು ತಿಳಿಸುವುದೇ ಅಲ್ಲದೇ ಅಗ್ನಿಯಂತೆ ಕರ್ಮಗಳನ್ನು ಸುಡುವ ಸ್ವಭಾವ ಹೊಂದಿವೆ. ಕೆಂಡದ ಸುತ್ತಲೂ ಏನೂ ಇಲ್ಲದೇ ಇರುವಾಗ ಬೆಂಕಿ ಬೆಂಕಿಯಹಾಗೇ ಇರುತ್ತದೆ. ಬೆಂಕಿಯ ಹತ್ತಿರಕ್ಕೆ ಕಸದ ಕುಪ್ಪೆಯನ್ನು ತಂದಿಟ್ಟರೂ, ಕಸದ ಕುಪ್ಪೆ ಹತ್ತಿರಕ್ಕೆ ಬೆಂಕಿಯನ್ನು ತಂದಿಟ್ಟರೂ ಕಸದಕುಪ್ಪೆ ಒತ್ತಿಕೊಂಡು ಸುಟ್ಟುಹೋಗುವುದು. ಹಾಗೆ ಏನನ್ನಾದರೂ ಸುಡುವುದು ಅಗ್ನಿಯವೊಂದರ ಸ್ವಭಾವ. ಹಾಗೇ ದೇವರ ಜ್ಞಾನ (ಇಂದೂಧರ್ಮ)

ಅಗ್ನಿಯೊಂದಿಗೆ ಸಮಾನವಾದುದು. ಆದ್ದರಿಂದ ಭಗವದ್ಗೀತೆಯಲ್ಲಿ ಅದನ್ನು ಜ್ಞಾನಾಗ್ನಿ ಎಂದು ಹೇಳುವುದು ನಡೆದಿದೆ.

ಯಾವ ಮತದಲ್ಲಾದರೂ ದೇವರ ಧರ್ಮ (ಇಂದೂಧರ್ಮ) ಸ್ವಚ್ಛವಾದ ಭಾವದಿಂದ ಇದ್ದರೆ ಅಗ್ನಿಯೊಂದಿಗೆ ಸಮಾನವಾಗಿರುತ್ತದೆ. ಹಾಗಲ್ಲದೇ ಯಾವ ಮತದಲ್ಲಾದರೂ ದೇವರ ಧರ್ಮವನ್ನು ಭಾವ ಹೀನ ಮಾಡಿದರೂ, ಅರ್ಥರಹಿತ ಮಾಡಿದರೂ, ಪ್ರಕಾಶಿಸುವ ಅಗ್ನಿಯನ್ನು ಮಣ್ಣಿನಿಂದ ಮುಚ್ಚಿಟ್ಟಂತಾಗುತ್ತದೆ. ಆಗ ಅದರ ಸ್ವಭಾವವನ್ನು ಕಳೆದುಕೊಳ್ಳುತ್ತದೆ. ಅರ್ಥರಹಿತ ಧರ್ಮ ನಂದುಹೋದ ಕೊಳ್ಳಿಯಂತೆ ಇರುತ್ತದೆ. ಭಗವದ್ಗೀತೆಯಲ್ಲಿ ಎಷ್ಟೋ ಜ್ಞಾನವನ್ನು ಹೇಳುವುದು ನಡೆದಿದೆ. ದೇವರು ಭಗವಂತನಾಗಿ ಬಂದು ಹೇಳಿದ ಜ್ಞಾನ ಒಂದು ಅಗ್ನಿಯಂಥದು. ದೇವರು ಸ್ವತಃವಾಗಿ ಹೇಳಿದ ಜ್ಞಾನ ಮೂರು ಇಂದೂ ಧರ್ಮಗಳನ್ನು ತಿಳಿಸಿದೆ. ಇಂದೂ ಧರ್ಮಗಳಿರುವ ಭಗವದ್ಗೀತಾ ಗ್ರಂಥವು ಕೆಂಡದಂಥದ್ದು. ಆದರೇ ಅದು ತಪ್ಪು ಭಾವನೆಗಳಿಂದ ತುಂಬಿ ಹೋಗಿರುವುದರಿಂದ, ಅಗ್ನಿ ನಂದುಹೋದ ಅಗ್ನಿಕುಂಡದಂತೆ ಉಳಿದುಹೋಗಿದೆ. ಇದೇ ವಿಧಾನ ಎಲ್ಲ ಮೂಲ ಗ್ರಂಥಗಳಿಗೆ ಅನ್ವಯಿಸುತ್ತದೆಂದು ತಿಳಿಯಬೇಕು. ಉಳಿದ ಮತ ಮೂಲ ಗ್ರಂಥಗಳಲ್ಲಿಯೂ ಸಹ ದೇವರ ಧರ್ಮಗಳು (ಇಂದೂ ಧರ್ಮಗಳು) ಇವೆ. ಆದ್ದರಿಂದ ಅವು ಸಹ ಅಗ್ನಿಕುಂಡದಂತವುಗಳೆ. ಆದರೇ ಅವು ನಿಜ ಭಾವಗಳಿಂದ ಇದ್ದರೇ ಉರಿಯುತ್ತಿರುವ ಅಗ್ನಿ ಆಗುತ್ತದೆ. ನಿಜ ಭಾವ ಇಲ್ಲದೇ ಹೋಗಿದ್ದರೇ ನಂದುಹೋದ ಅಗ್ನಿ ಆಗುತ್ತದೆ.

ಪ್ರಪಂಚ ಭೂಪಟದಲ್ಲಿ ಎಷ್ಟೋ ದೇಶಗಳು ಇವೆ. ಅದರಲ್ಲಿ ಭಾರತ ದೇಶವೂ ಸಹ ಒಂದು. ಕೃತಯುಗದಲ್ಲಿಯೇ ಭಾರತದೇಶವೆಂಬ ಹೆಸರು ಈ ದೇಶಕ್ಕೆ ಇದೆ. ದುಶ್ಯಂತನಿಗೆ ಶಕುಂತಲೆಗೆ ಹುಟ್ಟಿದ ಸಂತಾನ ಭರತನೆಂದು, ಭರತನು ಹುಟ್ಟಿದ ದೇಶವನ್ನು ಭಾರತದೇಶವೆಂದೆನ್ನುವುದು ನಡೆದಿದೆಯೆಂದು, ಕೆಲವರು ಭಾರತದೇಶ ಚರಿತ್ರೆಯನ್ನು ಹೇಳುತ್ತಿದ್ದಾರೆ. ಭರತನು ಹುಟ್ಟದ ಮೊದಲು ಎಷ್ಟೋ ಜನ ಹುಟ್ಟಿದ್ದಾರೆ. ಮೊದಲು ಹುಟ್ಟಿದವರ ಹೆಸರನ್ನು ಬಿಟ್ಟು, ನಂತರ

ಹುಟ್ಟಿದ ಭರತನ ಹೆಸರನ್ನು ಆಧಾರ ಮಾಡಿಕೊಂಡು, ಭಾರತದೇಶವೆಂದು ಹೆಸರು ಇಡಬೇಕಾದ ಅವಶ್ಯವೇನು ಬಂದಿದೆಯೆಂದು ಕೇಳಿದರೇ, ಅದಕ್ಕೆ ಈದಿನ ದೇಶ ಭಕ್ತರಾದವರು ಸಮಾಧಾನ ಹೇಳದೇ ಇದ್ದಾರೆ. ವಾಸ್ತವ ಚರಿತ್ರೆಯನ್ನು ತಿಳಿದರೆ ಭರತನು ಹುಟ್ಟದ ಮೊದಲಿನಿಂದ ಈ ದೇಶಕ್ಕೆ ಭಾರತ ದೇಶವೆಂಬ ಹೆಸರು ಇದೆ. ಪೂರ್ವದಲ್ಲಿ ಕೃತಯುಗದಲ್ಲಿಯೇ ಜ್ಯೋತಿಷ್ಯ ಶಾಸ್ತ್ರವನ್ನು ಅನುಸರಿಸಿ ಆದಿನ ಹಿರಿಯರು ಭಾರತದೇಶವೆಂದು ಹೆಸರು ಇಟ್ಟಿದ್ದಾರೆ. ಆ ಹೆಸರು ಇಂದಿಗೂ ಬದಲಾಗದಂತೆ ಭಾರತದೇಶವಾಗಿಯೇ ಇದೆ. ಕೆಲವರಿಗೆ ಇಲ್ಲೊಂದು ಪ್ರಶ್ನೆ ಬರಬಹುದು. ಕೆಲವರು ಹಿಂದೂ ದೇಶವೆನ್ನುತ್ತಾರೆ, ಕೆಲವರು ಭಾರತದೇಶವೆನ್ನುತ್ತಾರೆ. ಈ ಎರಡೂ ಹೆಸರುಗಳಲ್ಲಿ ಯಾವುದು ಅಸಲಾದ ಹೆಸರು ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೇ! ಭಾರತದೇಶ ಎನ್ನುವುದು ಈ ದೇಶಕ್ಕೆ ಇಟ್ಟ ಹೆಸರು. ಆದರೇ ಹಿಂದೂದೇಶವೆನ್ನುವುದು ಇಟ್ಟಿರುವ ಹೆಸರಲ್ಲ. ಒಬ್ಬ ಮನುಷ್ಯ ಹುಟ್ಟಿದಾಗ ಇಟ್ಟ ಹೆಸರು ಮೊದಲಿನಿಂದಲೂ ಇರುತ್ತದೆ. ಆದರೇ ಮಧ್ಯದಲ್ಲಿ ಕಲೆಕ್ಟರ್ ಉದ್ಯೋಗ ಬಂದರೆ ಅವನನ್ನು ಕೆಲವರು ಕಲೆಕ್ಟರೆಂದು ಹೇಳುತ್ತಿರುತ್ತಾರೆ. ಆತನ ಹೆಸರು ರಾಮಕೃಷ್ಣ ಎಂದು ಮೊದಲಿನಿಂದ ಇದ್ದರೂ ಆತನಿಗೆ ಕಲೆಕ್ಟರ್ ಉದ್ಯೋಗ ಬಂದ ನಂತರ ಆತನ ಬಳಿಗೆ ಹೋಗಿ ಬಂದವರು ರಾಮಕೃಷ್ಣನ ಹತ್ತಿರಕ್ಕೆ ಹೋಗಿ ಬಂದಿದ್ದೇವೆಂದು ಹೇಳದೇ ಕಲೆಕ್ಟರ್ ಹತ್ತಿರಕ್ಕೆ ಹೋಗಿ ಬಂದಿದ್ದೇವೆಂದು ಹೇಳುವರು. ಕಲೆಕ್ಟರ್ ಎನ್ನುವುದು ರಾಮಕೃಷ್ಣನಿಗೆ ಅಧಿಕಾರವಾದರೂ ಕೆಲವು ಕಡೆ ಕಲೆಕ್ಟರೆಂದು, ಕೆಲವು ಕಡೆ ರಾಮಕೃಷ್ಣ ಎಂದು ಆತನು ಕರೆಯಲ್ಪಡುತ್ತಿದ್ದಾನೆ. ಅದೇ ವಿಧವಾಗಿ ಭಾರತದೇಶ ಎನ್ನುವುದು ಈ ದೇಶಕ್ಕೆ ಮೊದಲೆ ಇಟ್ಟಿರುವ ಹೆಸರಾದರೆ, ಹಿಂದೂ ದೇಶವೆನ್ನವುದು ಹೆಸರಲ್ಲ ಆದರೇ ಭಾರತದೇಶಕ್ಕಿರುವ ಬಿರುದೆಂದು ತಿಳಿಯಬೇಕು. ಇಂದೂ ಎಂದರೇ ಜ್ಞಾನ ಎಂದು ಅರ್ಥ. ಭಾರತದೇಶ ದೈವಜ್ಞಾನಕ್ಕೆ ನಿಲಯವಾಗಿದೆ. ಆದ್ದರಿಂದ ಈ ದೇಶವನ್ನು ಇಂದೂದೇಶ ಎಂದು ಕರೆಯುತ್ತಿದ್ದರು. ಇಂದೂ ದೇಶವೆನ್ನುವುದು ಈ ದೇಶಕ್ಕಿರುವ ಬಿರುದಿನಂತದ್ದು ಅಥವಾ ಸ್ಥಾನವಂತದ್ದು. ಅಷ್ಟೇ ಹೊರತು ದೇಶಕ್ಕೆ ಹೆಸರಲ್ಲ.

ಪ್ರಪಂಚದ ದೇಶಗಳಿಗೆಲ್ಲ ದೈವ ಜ್ಞಾನಕ್ಕೆ ನಿಲಯವಾದ ದೇಶವಾಗಿ ಪೂರ್ವದಲ್ಲಿ ಭಾರತದೇಶ ಇದ್ದುದರಿಂದ, ಪ್ರಪಂಚದ ದೇಶಗಳೆಲ್ಲ ಭಾರತದೇಶವನ್ನು ಜ್ಞಾನಿಗಳ ದೇಶ ಎಂದು ಕರೆಯುತ್ತಿದ್ದರು. ಜ್ಞಾನಕ್ಕೆ ಜ್ಯೋತಿಷ್ಯ ಶಾಸ್ತ್ರದಲ್ಲಿ ಚಂದ್ರನು ಅಧಿಪತಿಯಾಗಿ ಇರುವುದರಿಂದ, ಜ್ಞಾನವನ್ನು ಇಂದೂ ಎಂದಿದ್ದಾರೆ. ಜ್ಞಾನಿಗಳ ದೇಶವಾಗಿರುವುದರಿಂದ ಭಾರತದೇಶವನ್ನು ಇಂದೂ ದೇಶ (ಜ್ಞಾನದೇಶ) ಎಂದು ಹೇಳುವುದು ನಡೆದಿದೆ. ಇಂದೂ ದೇಶ ಎನ್ನುವುದು ದೇಶದವೊಂದು ಹೆಸರಲ್ಲವೆಂದು, ಭಾರತದೇಶದವೊಂದು ಪ್ರತ್ಯೇಕತೆಯನ್ನು ತಿಳಿಸುವ ಸ್ಥಾನ ಎಂದು ತಿಳಿಯುತ್ತಿದೆ. ಭಾರತದೇಶ ಇಂದೂ ದೇಶ ಎಂದು ಕೃತಯುಗ, ತ್ರೇತಾಯುಗ, ದ್ವಾಪರಯುಗ ಎನ್ನುವ ಮೂರು ಯುಗಗಳಿಂದ ಕರೆಯಲ್ಪಡುತ್ತಿದೆ. ಆದರೇ ಈಗ ಕಲಿಯುಗದಲ್ಲಿ ಇಂದೂ ಎನ್ನುವ ಶಬ್ಧ ಸ್ವಲ್ಪ ಬದಲಾಗಿ ಸ್ವಲ್ಪ ವ್ಯತ್ಯಾಸದಿಂದ ಹಿಂದೂ ಎಂದು ಕರೆಯಲ್ಪಡುತ್ತಿದೆ. ಅದರಿಂದ ಇಂದೂದೇಶ ಹೋಗಿ ಹಿಂದೂ ದೇಶವಾಗಿದೆ. ಇಂದೂ (ಜ್ಞಾನಿ) ಎನ್ನುವವನು ಕೊನೆಗೆ ಹಿಂದೂವಾಗಿ ಕರೆಯಲ್ಪಡುತ್ತಿದ್ದಾನೆ. ಸ್ವಲ್ಪ ವ್ಯತ್ಯಾಸದಿಂದ ಹೇಗೆ ಕರೆದರೆ ಏನು, ಪದ ಪೂರ್ತಿಯಾಗಿ ಬದಲಾಗಿ ಹೋಗಿಲ್ಲವಲ್ಲ! ಎಂದು ಕೆಲವರು ಕೇಳಬಹುದು. ಅದಕ್ಕೆ ನಾವು ಏನು ಹೇಳುತ್ತಿದ್ದೇವೆಂದರೇ! ಮಂತ್ರವಲ್ಲದ ಮಾತಿಲ್ಲ, ಔಷಧವಲ್ಲದ ಎಲೆ ಇಲ್ಲ ಎಂಬ ನಾಣ್ಣುಡಿ ಪ್ರಕಾರ ಪ್ರತಿ ಮಾತು ಮಂತ್ರವೇ ಆಗುತ್ತದೆ. ಪ್ರತಿ ಮಂತ್ರಕ್ಕೂ ಒಂದು ಮಹಿಮೆ ಇರುತ್ತದೆ. ಇಂದೂ ಎನ್ನುವ ಶಬ್ಧ ಸಾಧಾರಣ ಮಾತಿಗಿಂತ ದೊಡ್ಡದು ಮತ್ತು ದೈವಜ್ಞಾನಕ್ಕೆ ಸಂಬಂಧಿಸಿರುವುದು. ಆದ್ದರಿಂದ ದೊಡ್ಡ ಶಕ್ತಿವಂತವಾದುದೆಂದು ಸಹ ಹೇಳಬಹುದು. ದೇವರ ಜ್ಞಾನವನ್ನು ಬರೆದ ಗ್ರಂಥದಲ್ಲಿ ಇಂದೂ ಜ್ಞಾನವಿದೆಯೆಂದು ಹೇಳಿದರೆ ಒಂದು ವಿಧದ ಸಾಮರ್ಥ್ಯವೂ ಹಿಂದೂ ಜ್ಞಾನವಿದೆಯೆಂದು ಹೇಳಿದರೆ ಮತ್ತೊಂದು ವಿಧದ ಸಾಮರ್ಥ್ಯವೂ ಇರುವುದು. ಇಂದೂಜ್ಞಾನ ಎಂದು ಹೆಸರಿಟ್ಟು, ಸ್ವಚ್ಛವಾದ ಧರ್ಮಗಳಿಂದ ಕೂಡಿಕೊಂಡ ಜ್ಞಾನದಿಂದ ಬರೆಯಲಾಗಿರುವ ನಮ್ಮ ರಚನೆಗಳು ಎಷ್ಟೋ ಜ್ಞಾನ ಶಕ್ತಿಯಿಂದ ಕೂಡಿಕೊಂಡಿವೆಯೆಂದು ಪ್ರತ್ಯಕ್ಷವಾಗಿ ತಿಳಿಯುತ್ತಿವೆ. ಇಂದೂ ಜ್ಞಾನ

ಶಕ್ತಿವಂತವಾದುದು, ಅಗ್ನಿ ಕುಂಡವಂತದ್ದು ಎಂದು ನಾವು ಹೇಳಿದಂತೆ, ಧರ್ಮಯುಕ್ತವಾದ ನಮ್ಮ ರಚನೆಗಳಲ್ಲಿನ ಇಂದೂಜ್ಞಾನ ಉರಿಯುತ್ತಿರುವ ಅಗ್ನಿಗಿದ್ದಷ್ಟು ಶಕ್ತಿ ಇದ್ದು, ಆ ಗ್ರಂಥಗಳ ಬಳಿಗೆ ಬಂದವರಿಗಾಗಲಿ, ಆ ಗ್ರಂಥಗಳನ್ನು ಓದುವವರಿಗಾಗಲಿ ಚಿಕ್ಕ ಚಿಕ್ಕ ಕರ್ಮಗಳನ್ನು ಸುಟ್ಟುಹಾಕುತ್ತಿವೆ. ನಮ್ಮ ರಚನೆಗಳಲ್ಲಿನ ಕೇವಲ 48 ಪುಟಗಳ **"ಮಂತ್ರ-ಮಹಿಮೆ"** ಎನ್ನುವ ಚಿಕ್ಕ ಗ್ರಂಥವನ್ನು ಓದಿದವರಿಗೂ ಸಹ ಅದರ ಪ್ರತ್ಯೇಕತೆ ಕಾಣಿಸುತ್ತಿದೆ. ಪ್ರಸ್ತುತ ಶರೀರದಲ್ಲಿ ಅನುಭವಕ್ಕೆ ಇರುವ ತಲೆನೋವಾಗಲೀ, ಹೊಟ್ಟೆ ನೋವಾಗಲೀ, ಚೇಳಿನ ವಿಷದ ನೋವಾಗಲಿ ಇರುವ ಯಾರಾದರೂ ಆ ಚಿಕ್ಕ ಗ್ರಂಥವನ್ನು ನೋವಿರುವ ಶರೀರ ಭಾಗದ ಮೇಲೆ ಇಟ್ಟರೇ ನೋವಿಲ್ಲದಂತೆ ಹೋಗುವುದರಿಂದ ಆ ಕರ್ಮ ಗ್ರಂಥದಲ್ಲಿನ ಜ್ಞಾನಶಕ್ತಿಗೆ ಸುಟ್ಟು ಹೋಗಿದೆಯೆಂದು ನಿರೂಪಣೆಗೆ ಬರುತ್ತಿದೆ.

ಈ ವಿಧವಾಗಿ ಇಂದೂಜ್ಞಾನ (ದೈವಜ್ಞಾನ) ಯಾವ ಮತ ಗ್ರಂಥದಲ್ಲಿದ್ದರೂ ಅದಕ್ಕೆ ಶಕ್ತಿ ಇರುತ್ತದೆ. ಆದರೇ ಎಲ್ಲ ಮತ ಗ್ರಂಥಗಳಲ್ಲಿ ನಿರೂಪಣೆಗೆ ಅಂತಹ ಶಕ್ತಿ ಕಾಣಿಸುವುದಿಲ್ಲವೇ ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೇ! ಉದಾಹರಣೆಯಾಗಿ ಹೇಳಿಕೊಂಡರೆ ಮೂರು ಮತಗಳಿಗು ಮೂರು ಮೂಲ ಗ್ರಂಥಗಳಿವೆಯಲ್ಲವೇ! ಅವುಗಳಲ್ಲಿ ಸ್ವಚ್ಛವಾದ ಇಂದೂ ಧರ್ಮಗಳೆ (ದೈವಧರ್ಮಗಳೆ) ಇವೆ. ಮೂಲ ಗ್ರಂಥಗಳಲ್ಲಿ ಭಗವದ್ಗೀತೆ ದೊಡ್ಡ ಶಕ್ತಿವಂತವಾಗಿದೆ. ಆದರೇ ಮನುಷ್ಯರಿಂದ ವಿವರಿಸಲ್ಪಟ್ಟಾಗ ಅದರಲ್ಲಿನ ಧರ್ಮಗಳು ಮುಚ್ಚಿಹಾಕಲ್ಪಟ್ಟಿವೆ. ಭಗವದ್ಗೀತೆಯಲ್ಲಿ ದೇವರು ಹೇಳಿರುವುದನ್ನು ಇರುವುದು ಇದ್ದಹಾಗೆ ಹೇಳದಂತೆ ದೇವರು ಒಂದು ಭಾವವನ್ನು ಹೇಳಿದ್ದರೆ, ಬರೆದ ಮನುಷ್ಯರು ಮತ್ತೊಂದು ಭಾವವನ್ನು ಪ್ರಕಟಿಸಿ ಬರೆದರೆ, ಅಲ್ಲಿ ದೇವರ ಭಾವನೆ ಇಲ್ಲದಂತೆ ಹೋಗುತ್ತದೆ. ಇಂದೂ ಭಾವನೆ ಮನುಷ್ಯನವರೆಗು ಸೇರದಂತೆ ಹೋಗುತ್ತಿದೆ. ಹಾಗಿರುವಾಗ ಅದರೊಳಗಿನ ಜ್ಞಾನಶಕ್ತಿ (ಜ್ಞಾನಾಗ್ನಿ) ಇಲ್ಲದಂತೆ ಹೋಗುತ್ತಿದೆ. ದೇವರು ಧರ್ಮರೂಪದಲ್ಲಿ ಉಳಿಸಿದ ಅಗ್ನಿಯನ್ನು ಮನುಷ್ಯರ

ಭಾವನೆಗಳಿಂದ ಮುಚ್ಚಿಹಾಕಿದಂತಾಗುವುದರಿಂದ, ಭಗವದ್ಗೀತೆಯಲ್ಲಿನ ಶಕ್ತಿ ಹೊರಗೆ ತಿಳಿಯದಂತೆ ಹೋಗುತ್ತಿದೆ. ಭಗವದ್ಗೀತೆಯಲ್ಲಿ ಸರಿಯಾದ ಭಾವನೆಗಳನ್ನೇ ಯಾರಾದರೂ ವಿವರಿಸಿ, ಅದರ ಮುಂದೆ ಹಿಂದೂ ಗ್ರಂಥವೆಂದು ಹೆಸರಿಟ್ಟರೂ, ಅದರಲ್ಲಿನ ಶಕ್ತಿ ಮಾಯವಾಗಿ ಹೋಗುವುದು. ಹಿಂದೂ ಎಂದು ಬರೆಯದಂತೆ ಇಂದೂ ಗ್ರಂಥ ಎಂದು ಬರೆದರೆ, ಭಗವದ್ಗೀತೆ ಗ್ರಂಥದಲ್ಲಿನ ಶಕ್ತಿ ಪ್ರಕಾಶಿಸುತ್ತದೆಂದು ತಿಳಿಯಬೇಕು. ಎಷ್ಟೋ ಬಲವಾದವನು ಅವನ ಕುತ್ತಿಗೆಗೆ ಅವನೇ, ಹಗ್ಗ ತಗುಲಿಸಿಕೊಂಡು ಉಸಿರಾಡದೇ ಸತ್ತನೆನ್ನುವಂತೆ, ಎಷ್ಟೋ ಶಕ್ತಿವಂತವಾದ ಭಗವದ್ಗೀತೆಯನ್ನು ಅದೇ ಕೆಲಸವಾಗಿ ಹಿಂದೂ ಗ್ರಂಥವೆಂದು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದಾರೆ. ಮತಕ್ಕೆ ತಗುಲಿಸಿಕೊಂಡ ಹಿಂದೂ ಎಂಬ ಪದವನ್ನು ಭಗವದ್ಗೀತೆಗೂ ಸಹ ತಗುಲಿಸಿರುವುದರಿಂದ, ಗೀತೆಯೂ ಸಹ ಮನುಷ್ಯನ ವರ್ತನೆಗೆ ಶಕ್ತಿಹೀನವಾಗಿ ಹೋಗುತ್ತಿದೆ. ನಾವು ಹೇಳುವ ಮಾತುಗಳು ಯಥಾರ್ಥ ಸತ್ಯ ಎನ್ನುವುದಕ್ಕೆ ಆಧಾರವಾಗಿ ನಮ್ಮಿಂದ ರಚಿಸಲ್ಪಟ್ಟ **"ಮಂತ್ರ –ಮಹಿಮೆ", "ಸತ್ಯಾನ್ವೇಷಿ", "ದೆವ್ವಗಳ ಹಾಗೂ ಭೂತಗಳ ಯಥಾರ್ಥ ಸಂಘಟನೆಗಳು", "ತ್ರೈತ ಸಿದ್ಧಾಂತ ಭಗವದ್ಗೀತೆ"** ಮೊದಲಾದ ಗ್ರಂಥಗಳಲ್ಲಿನ ಜ್ಞಾನಶಕ್ತಿ ಪ್ರತ್ಯಕ್ಷವಾಗಿ ಅನುಭವರೀತ್ಯಾ ಕಾಣಿಸುತ್ತಿದೆ. ಅಷ್ಟೇ ಅಲ್ಲದೇ ಇಂದೂ ಧರ್ಮಗಳ ಸಾರಾಂಶವಿರುವ ನಮ್ಮ ರಚನೆಗಳಲ್ಲಿನ ಮುಂಬರುವ ಗ್ರಂಥ ಗಳಲ್ಲಿಯೂ ಸಹ ಇಂದೂ ಅಗ್ನಿ (ಜ್ಞಾನಾಗ್ನಿ) ಪ್ರತ್ಯಕ್ಷವಾಗಿ ನಿರೂಪಣೆಗೆ ಬರುತ್ತದೆಂದು ತಿಳಿಸುತ್ತಿದ್ದೇನೆ. ಮೂಲ ಗ್ರಂಥಗಳೆಲ್ಲವುಗಳಲ್ಲಿ ದೈವಶಕ್ತಿ ಇದ್ದರೂ ಮಾನವನು ತನ್ನ ಭಾವನೆಗಳನ್ನು ಬರೆದು ಅದರಲ್ಲಿನ ಶಕ್ತಿಯನ್ನು ಇಲ್ಲದಂತೆ ಮಾಡುತ್ತಿದ್ದಾನೆ. ಬೈಬಲ್ ಗ್ರಂಥವನ್ನು ತೆಗೆದುಕೊಂಡು ನೋಡಿದರೆ ಅದರಲ್ಲಿ ಮನುಷ್ಯರ ವಿವರ ಇರದೇ ಹೋಗಿರುವುದರಿಂದ ಸ್ವಲ್ಪ ಶಕ್ತಿ ಅದರಲ್ಲಿ ಕಾಣಿಸುತ್ತಿದೆ. ಬೈಬಲನ್ನು ನೋಡಿದರೆ ದೆವ್ವಗಳು ಭಯಪಡುವುದು ಸ್ವಲ್ಪ ನಿರೂಪಣೆಯೇ ಅಲ್ಲವೇ!

ಮನುಷ್ಯ ಅನುಭವಿಸುತ್ತಿರುವ ಕರ್ಮವನ್ನು (ಬಾಧೆಯನ್ನು) ಅಥವಾ ರೋಗವನ್ನು ಮೂರು ವಿಧಗಳಲ್ಲಿ ಇಲ್ಲದಂತೆ ಮಾಡಬಹುದು. ಕರ್ಮ ಇಲ್ಲದಂತೆ

ಹೋಗಬೇಕೆಂದರೆ ಎರಡೇ ಮಾರ್ಗಗಳು ಇವೆ. ಒಂದು ಅನುಭವಿಸಿ ಇಲ್ಲದಂತೆ ಮಾಡಿಕೊಳ್ಳಬೇಕು. ಎರಡು ಇಂದೂ ಶಕ್ತಿಯಿಂದ ಕರ್ಮವನ್ನು ಸುಟ್ಟುಹಾಕಬೇಕು. ಈ ಎರಡು ವಿಧಾನಗಳಿಂದ ಕರ್ಮ ಇಲ್ಲದಂತೆ ಹೋಗುವುದು. ಬಹಳ ಜನರ ಕರ್ಮ ಅವರ ಅನುಭವದಿಂದಲೇ ಮುಗಿದು ಹೋಗುತ್ತದೆ. ಕೆಲವರ ಕರ್ಮ ಮಾತ್ರ ಜ್ಞಾನಶಕ್ತಿ (ಇಂದೂಶಕ್ತಿ) ಯಿಂದ ಸುಟ್ಟು ಹೋಗುತ್ತಿದೆ. ಹಾಗೆ ಸುಟ್ಟುಹೋಗುವುದು ಮೂರು ವಿಧಗಳಾಗಿ ಇದೆಯೆಂದು **"ದೆವ್ವಗಳ ಹಾಗೂ ಭೂತಗಳ ಯಥಾರ್ಥ ಸಂಘಟನೆಗಳು"** ಎಂಬ ಗ್ರಂಥದಲ್ಲಿಯೂ ಸಹ ಹೇಳಿಕೊಂಡಿದ್ದೇವೆ. ಅನುಭವದಲ್ಲಿರುವ ಕರ್ಮವನ್ನು ಔಷಧದಿಂದ, ಮಂತ್ರದಿಂದ, ಮಾತಿನಿಂದ ಇಲ್ಲದಂತೆ ಮಾಡಬಹುದೆಂದು ಹೇಳಿದ್ದೇವೆ. ಮಾತು ಎಂದರೆ ದೈವಜ್ಞಾನದಿಂದ ಕೂಡಿಕೊಂಡ ಮಾತು ಎಂದು ಅರ್ಥ. ಮಂತ್ರ ಎಂದರೆ ತ್ರೈತವಾಗಿರುವ ದೈವಶಕ್ತಿಯಿಂದ ಯೋಗಿಗಳು ತಯಾರು ಮಾಡಿದ ವಾಕ್ಯ ಎಂದು ಅರ್ಥ. ಔಷಧ ಎಂದರೆ ಎಲ್ಲದಕ್ಕೂ ಮೂಲಶಕ್ತಿಯಾಗಿರುವ ದೈವಶಕ್ತಿ ಇರುವ ಮೂಲಿಕೆಗಳಿಂದ ತಯಾರು ಮಾಡಲಾದ ಔಷಧ ಎಂದು ಅರ್ಥ. ಔಷಧ, ಮಂತ್ರ, ಮಾತು ಈ ಮೂರು ದೈವ ಶಕ್ತಿಯಿಂದ ಕೂಡಿಕೊಂಡಿರುವವವೇಯೆಂದು, ಅವುಗಳಿಂದ ಕರ್ಮ ನಿರ್ಮೂಲನೆಯಾಗುತ್ತದೆಂದು ಪ್ರತ್ಯಕ್ಷವಾಗಿ ತಿಳಿಯುತ್ತದೆ. ಕೆಲವರಿಗೆ ಔಷಧದಿಂದ ರೋಗ ನಯವಾಗುವ ವಿಷಯ ಮಾತ್ರ ಗೊತ್ತು. ಮಂತ್ರ, ಮಾತಿನಿಂದ ರೋಗ ಹೋಗುತ್ತದೆಂದು ತಿಳಿದಿಲ್ಲ. ಮಂತ್ರವನ್ನು ತಯಾರು ಮಾಡುವವರು ಯೋಗಿಗಳೇ. ಹಾಗೇ ಮಾತನ್ನು ಹೇಳುವವರೂ ಸಹ ಯೋಗಿಗಳೇ. ಯೋಗಿ ಎಷ್ಟು ಇಂದೂತ್ವವನ್ನು ಹೊಂದಿರುತ್ತಾನೋ ಆತನ ಮಾತು, ಮಂತ್ರ ಅಷ್ಟು ದೊಡ್ಡದಾಗಿ ಕೆಲಸ ಮಾಡುತ್ತವೆ. ಯೋಗಿ ಎಂದರೆ ಇತರೆ ದೇವತೆಗಳ ಆರಾಧನೆಗಳನ್ನು ಬಿಟ್ಟು, ಅಸಲಾದ ಪರಮಾತ್ಮ ಒಬ್ಬನನ್ನು ಆರಾಧಿಸುವವನು ನಿಜವಾದ ಯೋಗಿ ಆಗುವನೆಂದು ಗೀತೆಯಲ್ಲಿ ಹೇಳಲ್ಪಟ್ಟಿದೆ. ಪರಮಾತ್ಮ ಒಬ್ಬನನ್ನು ಆರಾಧಿಸುವುದು ಎಂದರೆ ದೇವರ ಧರ್ಮಗಳನ್ನು ಅನುಸರಿಸಿ ನಡೆದುಕೊಳ್ಳುವವನೆಂದು ಅರ್ಥ. ದೇವರ ಧರ್ಮಗಳನ್ನು ಇಂದೂ ಧರ್ಮಗಳೆಂದು ಅನ್ನಬೇಕೆಂದು ಹೇಳಿ

ಕೊಂಡಿದ್ದೇವಲ್ಲವೆ! ಇಂದೂಧರ್ಮಗಳನ್ನು ಆಚರಿಸುವವನಲ್ಲಿ ದೈವಶಕ್ತಿ ಒಳಪಟ್ಟಿರುತ್ತದೆ. ಅಂಥವನು ಸ್ಥೂಲವಾಗಿ ಯಾವ ಪದಾರ್ಥವನ್ನು ಕೊಟ್ಟರೂ ಅದು ರೋಗಿಗೆ ಔಷಧವಾಗಿ ಕೆಲಸ ಮಾಡುತ್ತದೆ. ಹಾಗೆ ಆತನು ಅಕ್ಷರ ಶಬ್ಧವನ್ನು ಜೋಡಿಸಿ ಹೇಳಿರುವುದು ಮಂತ್ರವಾಗುತ್ತದೆ. ದೈವಶಕ್ತಿ ಇರುವವನು ಕೊಟ್ಟ ಔಷಧವನ್ನು ಯಾರಾದರೂ ರೋಗಿಗೆ ಬಳಸಬಹುದು. ಹಾಗೇ ದೈವಶಕ್ತಿ (ಇಂದೂಶಕ್ತಿ) ಇರುವವನು ಶಬ್ಧಗಳನ್ನು ಹೊಂದಿಸಿ ತಯಾರು ಮಾಡಿದ ಮಂತ್ರವನ್ನು ಸಹ ಯಾರಾದರೂ ರೋಗಿಗೆ ಬಳಸಬಹುದು. ದೈವಶಕ್ತಿ ಇರುವ ಯೋಗಿ ಮಾತುಗಳನ್ನು ಮಾತ್ರ ಆಗಿಂದಾಗ್ಗೆ ಸ್ವತಃವಾಗಿ ಹೇಳುವನು. ಮಾತನ್ನು ಯೋಗಿ ಸ್ವತಃವಾಗಿ ಹೇಳಬೇಕಾದ್ದೆ. ಎದುರಿಗಿರುವ ರೋಗಿಯನ್ನು ನೋಡಿ ತನ್ನೊಳಗಿನ ಸಂಕಲ್ಪದಿಂದ ಯೋಗಿ ಹೇಳಿದ ಮಾತಿನಲ್ಲಿ ದೈವಶಕ್ತಿ ಇರುವುದರಿಂದ, ಆ ಮಾತು ರೋಗಿ ಮೇಲೆ ಕೆಲಸಮಾಡಿ, ಅವನ ಕರ್ಮವನ್ನು ಸುಟ್ಟುಹಾಕಿ, ಅವನು ಅನುಭವಿಸುತ್ತಿದ್ದ ನೋವಿನಿಂದ ವಿಮುಕ್ತರನ್ನಾಗಿ ಮಾಡುವನು.

ದೈವಶಕ್ತಿ ಇರುವ ಯೋಗಿ ಎನ್ನುವವನು ಒಂದು ಮತಕ್ಕೆ ಪರಿಮಿತನಲ್ಲ. ಎಲ್ಲ ಮತಗಳಲ್ಲಿಯೂ ದೈವಶಕ್ತಿಯಿರುವವರು ಇರಬಹುದು. ಬೇರೆಬೇರೆ ಮತಗಳಲ್ಲಿ ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡಬಹುದು. ಇಂದೂಮತದಲ್ಲಿ ಮಾತ್ರ **ದೈವಶಕ್ತಿಯಿರುವವನನ್ನು ಯೋಗಿ** ಎನ್ನಲಾಗುತ್ತದೆ. ಪ್ರಪಂಚದಲ್ಲಿ **ಪುಣ್ಯವನ್ನು ಅನುಭವಿಸುವವನನ್ನು ಭೋಗಿ** ಎನ್ನುತ್ತೇವೆ. **ಪಾಪವನ್ನು ಅನುಭವಿಸುವವನನ್ನು ರೋಗಿ** ಎನ್ನುತ್ತೇವೆ. ಇದನ್ನು ಅನುಸರಿಸಿ ನೋಡಿದರೆ ಪುಣ್ಯದಿಂದ ಬರುವ ಸುಖವನ್ನು ಅನುಭವಿಸುವವನು ಭೋಗಿ ಎಂದು ತಿಳಿಯುತ್ತಿದೆ. ಹಾಗೇ ಪಾಪದಿಂದ ಬರುವ ದುಃಖಗಳನ್ನು ಅಥವಾ ಕಷ್ಟಗಳನ್ನು ಯಾವ ರೂಪದಲ್ಲಾದರೂ ಅನುಭವಿಸುವವನನ್ನು ರೋಗಿ ಎನ್ನುತ್ತೇವೆ. ರೋಗಿ, ಭೋಗಿಗೆ ಸಂಬಂಧಿಸಿದ ಪಾಪ ಪುಣ್ಯಗಳನ್ನು ಎರಡನ್ನೂ ಅಂದರೆ ಕರ್ಮವನ್ನು ಇಲ್ಲದಂತೆ ಮಾಡಬಹುದಾದ ಇಂದೂಶಕ್ತಿ ಇರುವವನು ಯೋಗಿ. ಕರ್ಮವನ್ನು

ಅನುಭವಿಸುವವರನ್ನು ರೋಗಿ, ಭೋಗಿ ಎಂದೂ, ಕರ್ಮವನ್ನು ನಿರ್ಮೂಲಿಸುವವನನ್ನು ಯೋಗಿ ಎಂದು ಇಂದೂ ಜ್ಞಾನದಲ್ಲಿ ಇದೆ. ತಲೆನೋವು, ಹೊಟ್ಟೆನೋವು ಬಂದವನನ್ನೇ ರೋಗಿ ಎಂದು ಅಂದುಕೊಳ್ಳಬಾರದು. ಆರ್ಥಿಕವಾಗಿಯಾಗಲಿ, ಶಾರೀರಕವಾಗಿಯಾಗಲಿ ಅನೇಕ ವಿಧಗಳಲ್ಲಿ ಬರುವ ನೋವುಗಳೆಲ್ಲವನ್ನು ಜ್ಞಾನದ ಪ್ರಕಾರ ರೋಗಗಳೆಂದೇ ಹೇಳಬಹುದು. ಉದಾಹರಣೆಗೆ ಹೇಳಿಕೊಂಡರೇ ಶ್ರೀಕೃಷ್ಣನ ಕಾಲದಲ್ಲಿ ಆತನ ಬಾಲ್ಯ ಸ್ನೇಹಿತನಾದ ಕುಚೇಲನು, ಆರ್ಥಿಕವಾಗಿ ಹಿಂದುಳಿದು ಅನೇಕ ನೋವುಗಳನ್ನು ಅನುಭವಿಸುತ್ತಾ ದೊಡ್ಡ ರೋಗಿಯಾಗಿದ್ದನು. ಅಂತಹ ರೋಗಿಯಾದ ಕುಚೇಲನು ಶ್ರೀಕೃಷ್ಣನ ಬಳಿಗೆ ಬಂದು, ಕುಚೇಲನು ತನ್ನ ನೋವುಗಳನ್ನು ಕೃಷ್ಣನಿಗೆ ಹೇಳದಿದ್ದರೂ, ದೈವಶಕ್ತಿಯಿರುವ ಕೃಷ್ಣನ ಕೈ ಸ್ಪರ್ಷದಿಂದಲೆ ಕುಚೇಲನ ಕರ್ಮ ಸುಟ್ಟು ಹೋಗುವುದು ನಡೆದಿದೆ. ನಂತರ ಕುಚೇಲನಿಗೆ ಆಶ್ಚರ್ಯವಾಗಿ ನೋವುಗಳೆಲ್ಲ ತೊಲಗಿಹೋಗಿವೆ.

ಭೂಮಿಮೇಲಿನ ಪ್ರಜೆಗಳಿಗಾಗಿ ದೇವರು ಸೃಷ್ಠಿ ಆದಿಯಲ್ಲಿಯೇ ಸೂರ್ಯನ ಮೂಲಕ ತನ್ನ ಧರ್ಮಗಳಿಂದ ಕೂಡಿಕೊಂಡ ಜ್ಞಾನವನ್ನು ಒದಗಿಸಿದ್ದಾನೆ. ಆಗ ಹೇಳಿದ ಜ್ಞಾನ ಈಗ ಹಿಂದೂಗಳಿಗೆ ಭಗವದ್ಗೀತೆಯಾಗಿ, ಕ್ರೈಸ್ತರಿಗೆ ಬೈಬಲ್ ಆಗಿ, ಮುಸ್ಲಿಮ್‌ರಿಗೆ ಖುರಾನ್ ಗ್ರಂಥವಾಗಿ ಇದೆ. ಈ ದಿನ ಪ್ರತ್ಯಕ್ಷವಾಗಿರುವ ಮೂರು ಮೂಲ ಗ್ರಂಥಗಳಲ್ಲಿಯೂ ಆ ದಿನ ಹೇಳಿದ ಜ್ಞಾನವಿದೆ. ಯಾವ ಮತದಲ್ಲಿರುವವರು ಆ ಮತದಲ್ಲಿ ದೇವರ ಜ್ಞಾನವನ್ನು, ಧರ್ಮವನ್ನು ತಿಳಿಯಬಹುದು, ತಿಳಿದು ಆಚರಿಸಬಹುದು. ಆಚರಿಸುವುದರಿಂದ ದೈವಶಕ್ತಿ ಮನುಷ್ಯನಲ್ಲಿ ಸೇರಿಹೋಗುತ್ತದೆ. ಹಾಗೆ ಸೇರಿದ ಶಕ್ತಿ ಯಾವ ಮತದಲ್ಲಾದರೂ ರೋಗಿ ಮೇಲೆ ಕೆಲಸ ಮಾಡುತ್ತದೆ. ಆದ್ದರಿಂದ ಅದನ್ನು ಯೋಗಶಕ್ತಿ ಎಂದು, ಅದನ್ನು ಹೊಂದಿದವನು ಯೋಗಿ ಎಂದು ಹೇಳಬಹುದು. ಯಾವ ಮತದಲ್ಲಾದರೂ ರೋಗಿ ಎನ್ನುವವನು ಇದ್ದಾನೆ. ಆದ್ದರಿಂದ ಯಾವ ಮತದಲ್ಲಾದರೂ ಯೋಗಿ ಇರಬಹುದೆಂದು ಹೇಳುತ್ತಿದ್ದೇವೆ. ಆದರೇ

ದುರದೃಷ್ಟವಶಾತ್ತು ಈಗಿನ ಕಾಲದಲ್ಲಿ ಭೂಮಿ ಮೇಲೆ ಯೋಗಿಗಳನ್ನು ಹುಡುಕಿದರೂ ಕಾಣಿಸದಂತೆ ಹೋಗಿದ್ದಾರೆ. ಪೂರ್ವಕಾಲದಲ್ಲಿದ್ದ ಯೋಗಿಗಳ ಇರುವಿಕೆ ಈಗ ಇಲ್ಲದಂತೆ ಹೋಗಿರುವುದಕ್ಕೆ ಕಾರಣವೇನು ಎಂದು ನೋಡಿದರೆ, ಸ್ವಲ್ಪ ಆಶ್ಚರ್ಯವಾದ ವಿಷಯ ತಿಳಿಯುತ್ತದೆ. ವರ್ಷಕ್ಕೆ ಒಂದು ಬಾರಿ ಬೆಳೆದ ಧಾನ್ಯ ವರ್ಷವೆಲ್ಲಾ ತಿನ್ನಬೇಕಾಗಿ ಬರುತ್ತದೆ. ಆದರೆ ವರ್ಷದವರೆಗು ಇಟ್ಟುಕೊಂಡ ಧಾನ್ಯ ವರ್ಷದ ಕೊನೆಗೆಲ್ಲ ಹಳೆಯದಾಗಿ ಹೋಗುವುದು. ಹಳೆಯದಾಗಿ ಹೋಗುವುದೆಂದರೆ ಧಾನ್ಯದಲ್ಲಿನ ಬೆಲೆ ಬದಲಾಗದಿದ್ದರೂ ಧಾನ್ಯದೊಳಗೆ ಹುಳುಗಳು ಬಂದು ಸೇರುತ್ತವೆ. ಮೊದಲು ಇಡುವಾಗ ಸ್ವಚ್ಛವಾಗಿದ್ದ ಧಾನ್ಯ, ಕಾಲ ಕಳೆದಂತೆಲ್ಲಾ ಆ ಧಾನ್ಯದೊಳಗೆ ಎರಡು ಮೂರು ವಿಧದ ಹುಳುಗಳು ಸೇರಿ ಧಾನ್ಯವನ್ನು ಕಲುಷಿತ ಮಾಡುತ್ತವೆ. ಆಗ ಧಾನ್ಯವನ್ನು ಆಹಾರಕ್ಕಾಗಿ ಹಾಗೆಯೇ ಬಳಸಿಕೊಳ್ಳಬಾರದು. ಏಕೆಂದರೇ ಅದರಲ್ಲಿ ಹುಳುಗಳು ಇವೆ. ಧಾನ್ಯವನ್ನು ಶುಭ್ರಮಾಡಿ, ಹುಳುಗಳನ್ನು ತೆಗೆದುಹಾಕಿ ಬಳಸಿಕೊಳ್ಳಬೇಕಾಗುತ್ತದೆ. ಹಾಗೆ ಶುಭ್ರ ಮಾಡದಂತೆ ಧಾನ್ಯವನ್ನು ಬಳಸಿಕೊಂಡರೆ ಅದು ಆರೋಗ್ಯವನ್ನು ಕೊಡುವುದಿಲ್ಲ. ಇರುವ ಆರೋಗ್ಯವೂ ಸಹ ಅಂತಹ ಕಲುಷಿತ ಆಹಾರದಿಂದ ಕೆಟ್ಟುಹೋಗುವುದಕ್ಕೆ ಅವಕಾಶವಿದೆ.

ಸ್ವಲ್ಪ ಕಾಲದವರೆಗು ಇಟ್ಟುಕೊಂಡ ಸ್ವಚ್ಛವಾದ ಧಾನ್ಯ ಹೇಗೆ ಹುಳುಗಳು ಸೇರಿ ಕಲುಷಿತವಾಗಿವೆಯೊ, ಹಾಗೇ ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಸ್ವಚ್ಛವಾದ ಜ್ಞಾನ, ಕಾಲಕಳೆದಂತೆಲ್ಲಾ ಸ್ವಲ್ಪ ಬದಲಾಗಿ, ಇಂದಿಗೂ ಮೂಲ ಗ್ರಂಥಗಳ ರೂಪದಲ್ಲಿ ಇದೆ. ಆದಿಯಲ್ಲಿ ದೇವರು ಹೇಳಿದ ಜ್ಞಾನ ಬದಲಾಗದಂತೆ ಹಾಗೇ ಇದ್ದರೂ, ಕೆಲವು ಅಧರ್ಮಗಳು ಅಕ್ಕಿಯೊಳಗೆ ಹುಳುಗಳು ಸೇರಿದಂತೆ ಧರ್ಮದೊಳಗೆ ಸೇರಿಹೋಗಿವೆ. ಕಣ್ಣಿಗೆ ದೃಷ್ಠಿಯಿದ್ದವನು ಅಕ್ಕಿಯೊಳಗಿನ ಹುಳುಗಳನ್ನು ಆರಿಸಿ, ಸ್ವಚ್ಛವಾದ ಅಕ್ಕಿಯನ್ನು ಹುಳುಗಳಿಂದ ಬೇರ್ಪಡಿಸಿ ತಿನ್ನುವನು. ಅದೇ ದೃಷ್ಠಿಯಿಲ್ಲದವನಾದರೇ ಹುಳುಗಳನ್ನು ಗುರುತಿಸಲಾರನು. ತನ್ನ ಬಳಿ ಇರುವವೆಲ್ಲ ಅಕ್ಕಿಯೆ ಎಂದು ಅಂದುಕೊಳ್ಳುವನು. ಅಕ್ಕಿ ಹುಳುಗಳಿಂದ

ಕಲುಷಿತವಾಗಿವೆ ಎಂದು ಆತನಿಗೆ ತಿಳಿಯುವುದಿಲ್ಲ. ಪ್ರಸ್ತುತ ಕಾಲದಲ್ಲಿ ಎಲ್ಲ ಮತಗಳ ಗ್ರಂಥಗಳಲ್ಲಿಯೂ ದೈವಧರ್ಮಗಳಿದ್ದರೂ, ಅವುಗಳ ನಡುವೆ ಅಲ್ಲಲ್ಲಿ ಅಧರ್ಮಗಳು ಸಹ ಸೇರಿಹೋಗಿವೆಯೆಂದು ಆಯಾ ಗ್ರಂಥದವರು ಗುರುತಿಸದೇ ಹೋಗುತ್ತಿದ್ದಾರೆ. ಅದಕ್ಕೆ ಕಾರಣ ವಿಚಕ್ಷಣೆ ಎನ್ನುವ ಜ್ಞಾನದೃಷ್ಠಿ ಮನುಷ್ಯನಿಗೆ ಇಲ್ಲದೇ ಹೋಗುವುದರಿಂದ, ಗ್ರಂಥಗಳಲ್ಲಿರುವುದೆಲ್ಲಾ ಸ್ವಚ್ಛವಾದ ಜ್ಞಾನವೇ ಯೆಂದು ಅಂದುಕೊಳ್ಳುತ್ತಿದ್ದಾರೆ. ದೃಷ್ಠಿಯಿಲ್ಲದವನು ನನಗೆ ದೃಷ್ಠಿಯಿದೆಯೆಂದು ಅಂದುಕೊಳ್ಳುವುದರಿಂದ, ಕಣ್ಣಿರುವವನು ಹೇಳಿದರೂ ಕೇಳುವ ಸ್ಥಿತಿಯಲ್ಲಿಲ್ಲ. ಅಂತಹ ಪರಿಸ್ಥಿತಿ ಎಲ್ಲ ಮತಗಳಲ್ಲಿಯೂ ವ್ಯಾಪಿಸಿದೆ. ಆದ್ದರಿಂದ ಮನುಷ್ಯ ದೇವರ ಧರ್ಮಗಳನ್ನು ಸ್ವಚ್ಛವಾಗಿ ಗ್ರಹಿಸದೆ ಯೋಗಿಯಂತೆ ಬದಲಾಗದೇ ಇದ್ದಾನೆ. ಎಲ್ಲಿ ನೋಡಿದರೂ ಭೋಗಿಗಳು, ರೋಗಿಗಳು ಕಾಣಿಸುತ್ತಾರೆ ಹೊರತು ಯೋಗಿಗಳು ಕಾಣಿಸುತ್ತಿಲ್ಲ.

ಮನುಷ್ಯ ಭೋಗಿಗಿಂತ, ರೋಗಿಗಿಂತ ಅಧಿಕನಾದ ಯೋಗಿ ಆಗುವುದಕ್ಕೆ ಇಂದೂ ಧರ್ಮಗಳನ್ನು ಖಂಡಿತ ಆಚರಿಸಬೇಕು. ಇಂದೂಧರ್ಮಗಳು ಹಿಂದೂ ಮತದಲ್ಲಿವೆ, ನಮ್ಮ ಮತದಲ್ಲಿ ನಮ್ಮ ಮತಧರ್ಮಗಳಿವೆಯೆಂದು ಯಾರಾದರೂ ಅಂದುಕೊಳ್ಳಬಹುದು. ಅಂತವರು ಮುಖ್ಯವಾಗಿ ತಿಳಿಯಬೇಕಾಗಿರುವುದೇನೆಂದರೆ! ಯಾವ ಮತದಲ್ಲಾದರೂ ದೈವಧರ್ಮಗಳಿವೆ. ದೈವಧರ್ಮಗಳನ್ನು ನೇರವಾಗಿ ದೈವಧರ್ಮಗಳೆಂದು ಅನ್ನಬಾರದೆಂದು ಅದಕ್ಕೆ ಇಂದೂ ಎಂಬ ಪದವನ್ನು ಉಪಯೋಗಿಸಿ ಇಂದೂ ಧರ್ಮಗಳೆಂದು ಹೇಳಬೇಕೆಂದು ಅಂದುಕೊಂಡಿದ್ದೇವೆ. ಯಾವ ಮತದಲ್ಲಿನ ಮನುಷ್ಯನಿಗಾಗಲಿ ದೈವಶಕ್ತಿ ಚಂದ್ರನ ಮುಖಾಂತರವೇ ಮನುಷ್ಯನೊಳಗೆ ಸೇರಬೇಕು. ಔಷಧಗಳಿಗೆ ಶಕ್ತಿಯಾಗಲಿ, ಮಂತ್ರಕ್ಕೆ ಶಕ್ತಿಯಾಗಲಿ, ಮಾತಿಗೆ ಶಕ್ತಿಯಾಗಲಿ ಚಂದ್ರನಿಂದಲೆ ಲಭಿಸುತ್ತಿರುವುದರಿಂದ, ಆಧ್ಯಾತ್ಮಿಕ ವಿದ್ಯೆಯಲ್ಲಿ ಚಂದ್ರನಿಗೆ ಸಮುಚಿತ ಸ್ಥಾನವಿದೆ. ಮನುಷ್ಯನಿಗೆ ಲಭಿಸುವುದು ದೈವಶಕ್ತಿಯಾದರೂ, ಅದು ಚಂದ್ರನಿಂದ ಲಭಿಸುವುದರಿಂದ ಅದನ್ನು ಇಂದೂಶಕ್ತಿಯೆಂದು, ಇಂದೂಶಕ್ತಿ ಇಂದೂಧರ್ಮಗಳನ್ನು ಆಚರಿಸುವುದರಿಂದ

ಬರುತ್ತದೆಂದು ಹೇಳಿಕೊಂಡಿದ್ದೇವೆ. ಆದರೇ ಕೆಲವರು ಹಿಂದೂಗಳು ಮತರಕ್ಷಣೆ ಎನ್ನುವ ಹೆಸರನ್ನು ಅಂಟಿಸಿಕೊಂಡು, ಸ್ವಲ್ಪವಾದರೂ ಆಧ್ಯಾತ್ಮಿಕ ಜ್ಞಾನವಿಲ್ಲದವ ರಾಗಿ, ಇಂದೂ ಎನ್ನುವ ಪದವನ್ನು ಒಪ್ಪಿಕೊಳ್ಳುತ್ತಿಲ್ಲ. ಇಂದೂಜ್ಞಾನ ಎಂದು, ಇಂದೂಧರ್ಮ ಎಂದು, ಇಂದೂಗಳು ಎಂದು ನಾವು ಹೇಳಿದರೆ ನಿಮ್ಮದು ಬೇರೆ ಮತವೆಂದು ಅನ್ನುತ್ತಿದ್ದಾರೆ. ಈದಿನ ಹಿಂದೂಗಳಾದ ಕೆಲವರಿಗೆ ಮತ ಹೊರತು ಜ್ಞಾನ ಕಾಣಿಸುವುದಿಲ್ಲ. ಆದ್ದರಿಂದ ಈದಿನ ಹಿಂದೂಗಳಾಗಿರುವವರು ಇಂದೂಗಳು (ಜ್ಞಾನಿಗಳು) ಆಗಲಾರದೆ ಹೋಗುತ್ತಿದ್ದಾರೆ. ಇಂದೂ ಎನ್ನುವ ಪದವನ್ನೇ ಅರ್ಥ ಮಾಡಿಕೊಳ್ಳಲಾಗದೆ ಇದ್ದಾರೆ. ಹಿಂದೂಗಳೇ ತಮ್ಮದು ಇಂದೂ ಧರ್ಮವೆಂದು ಒಪ್ಪಿಕೊಳ್ಳದೇ ಇರುವಾಗ, ಇತರ ಮತದವರು ಇಂದೂಧರ್ಮವನ್ನು ಹೇಗೆ ಒಪ್ಪಿಕೊಳ್ಳುತ್ತಾರೆ? ಇತರ ಮತದವರು ತಮ್ಮ ಮತವನ್ನು ಹೇಳಿಕೊಳ್ಳುವುದರಲ್ಲಿ ಮುಳುಗಿ ಹೋಗಿದ್ದಾರೆ ಹೊರತು, ತಮ್ಮದು ಸಹ ದೇವರು ಒದಗಿಸಿಕೊಟ್ಟ ಇಂದೂಜ್ಞಾನವೆಂದು ಅಂದುಕೊಳ್ಳುವುದಿಲ್ಲ. ಈ ವಿಧವಾಗಿ ಪ್ರತಿ ಮತದೊಳಗಿರುವ ಇಂದೂತ್ವವು ಮನುಷ್ಯರಿಂದ ಗುರುತಿಸಲ್ಪಡುವುದಿಲ್ಲ. ಪ್ರತಿ ಮತದಲ್ಲಿಯೂ ಕಲುಷಿತ ಜ್ಞಾನದ ನಡುವೆ ಇಂದೂತ್ವ ಲೋಪಿಸುವುದರಿಂದ, ಪ್ರತಿ ಮತದಲ್ಲಿಯೂ ಶಕ್ತಿಯಿಲ್ಲದ ಭಕ್ತರಿದ್ದಾರೆ ಹೊರತು, ಶಕ್ತಿಯಿರುವ ಯೋಗಿಗಳು ಇಲ್ಲದಂತೆ ಹೋಗಿದ್ದಾರೆ. ನಾವು ಪದೇ ಪದೇ ಪ್ರತಿ ಮತದವರಿಗೂ ನಿಮ್ಮ ಗ್ರಂಥದಲ್ಲಿನ ವಾಕ್ಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳಿರೆಂದು ಹೇಳುತ್ತಿದ್ದೇವೆ. ಆದರೇ ಪ್ರತಿಯೊಬ್ಬರೂ ಮತದಲ್ಲಿ ಮುಳುಗಿ ಹೋಗಿ ಅದರಿಂದಲೇ ನಮ್ಮನ್ನು ನೋಡುತ್ತಿದ್ದಾರೆ ಹೊರತು ನಮ್ಮ ಮಾತನ್ನು ಗ್ರಹಿಸುತ್ತಿಲ್ಲ. ಯಾರು ಏನೆಂದುಕೊಂಡರೂ ನಾವು ಮಾತ್ರ ಮತದ ಮೇಲೆ ಪ್ರೇಮ, ಅಸೂಯೆ ಎಂಬ ಪ್ರಸ್ತಾವನೆಯೇ ಇಲ್ಲದಂತೆ ಎಲ್ಲ ಮತಗಳಿಗೂ ಸಮಾನವಾಗಿ ಅನ್ವಯಿಸುವ ಸೂತ್ರಗಳನ್ನು ಹೇಳುತ್ತಿದ್ದೇವೆ. ಪ್ರತಿ ಮತದೊಳಗಿನ ಇಂದೂತ್ವವನ್ನು ಕಾಪಾಡೋಣವೆಂದು ಹೇಳುತ್ತಿದ್ದೇವೆ. ಇಂದೂತ್ವ ಎಂದರೆ ಮತ ಸಂಬಂಧವಲ್ಲ. ದೇವರಿಗೆ ಸಂಬಂಧಿಸಿದ ಪದವೆಂದು ಜ್ಞಾಪಕದಲ್ಲಿಟ್ಟುಕೊಳ್ಳಿ. ಪ್ರತಿ ಮತದಲ್ಲಿನ ಮನುಷ್ಯ ದೇವರ ಬಳಿಗೆ ಹೋಗಬೇಕೆಂದು, ಅದಕ್ಕೆ ಬೇಕಾದ

ಧರ್ಮಗಳನ್ನು ತಿಳಿದುಕೊಳ್ಳಿರೆಂದು, ಕಲುಷಿತವಾದ ಧರ್ಮದಿಂದ ಕಲುಷಿತಗಳನ್ನು ತೆಗೆದುಹಾಕಿ ಅಸಲಾದ ಧರ್ಮವನ್ನು ಸ್ವೀಕರಿಸಿರೆಂದು ಕೋರುತ್ತಿದ್ದೇನೆ.

ಹಿಂದೂಗಳು ತಾವು ಯಾವ ಗ್ರಂಥವನ್ನು ಪ್ರಮಾಣವಾಗಿ ತೆಗೆದು ಕೊಂಡು ಆಧ್ಯಾತ್ಮಿಕತೆಯಲ್ಲಿ ಮುಂದಕ್ಕೆ ಹೋಗಬೇಕೋ ಪೂರ್ತಿಯಾಗಿ ತಿಳಿಯದೆ, ಕೆಲವರು ವೇದಗಳನ್ನು ಪ್ರಮಾಣವಾಗಿ ತೆಗೆದುಕೊಳ್ಳುತ್ತಾ, ಹಿಂದೂಗಳಿಗೆ ವೇದಗಳು ಮುಖ್ಯವೆಂದು ಹೇಳುತ್ತಿದ್ದಾರೆ. ಕೆಲವರು ಭಗವದ್ಗೀತೆ ಮುಖ್ಯವೆಂದು ಅನ್ನುತ್ತಿದ್ದಾರೆ. ಏಕೆ ಹಾಗೆ ಎರಡು ವಿಧಗಳಾಗಿ ಹೇಳುತ್ತಿದ್ದಾರೆಂದು ಯೋಚಿಸಿದಾಗ ಮತ್ತು ವಿಚಾರಿಸಿದಾಗ ಈ ರೀತಿ ತಿಳಿಯುತ್ತಿದೆ. ವೇದಗಳನ್ನು ಬರೆದಿರುವುದು ವೇದವ್ಯಾಸ. ವೇದವ್ಯಾಸ ಬ್ರಾಹ್ಮಣನಾಗಿರುವುದರಿಂದ ಬ್ರಾಹ್ಮಣ ವರ್ಗದವರೆಲ್ಲರೂ, ತಮ್ಮ ಬ್ರಾಹ್ಮಣನು ಬರೆದ ವೇದ ಮುಖ್ಯವೆಂದು ಅನ್ನುತ್ತಿದ್ದೇವೆ. ಕೃಷ್ಣ ಕ್ಷತ್ರಿಯನಾಗಿ ಹುಟ್ಟಿ ಗೊಲ್ಲನಂತೆ ಬದುಕಿದವನು ಬ್ರಾಹಣನಲ್ಲ, ಆದ್ದರಿಂದ ಶೂದ್ರನು ಹೇಳಿದ ಭಗವದ್ಗೀತೆ ಮುಖ್ಯವಲ್ಲ ಎಂದು, ವ್ಯಾಸ ಬ್ರಾಹ್ಮಣನಾಗಿರುವು ದರಿಂದ ಆತನು ಹೇಳಿರುವುದೇ ಬ್ರಹ್ಮಜ್ಞಾನವೆಂದು, ಆದುದರಿಂದ ಕೃಷ್ಣನ ಗೀತೆಗಿಂತ ವ್ಯಾಸನ ವೇದಗಳು ಮುಖ್ಯವೆಂದು, ಹಿಂದೂಮತದಲ್ಲಿ ಪ್ರಚಾರ ಮಾಡಲಾಗಿದೆ. ಹಿಂದೂಮತದಲ್ಲಿನ ಜ್ಞಾನಿಗಳು ಕೆಲವರು ಭಗವದ್ಗೀತೆಯೇ ಮುಖ್ಯವೆಂದು ತೀರ್ಮಾನಿಸಿ ಹೇಳಲಾಗಿದೆ. ಈಗಲೂ ವೇದಗಳಾ, ಭಗವದ್ಗೀತೆನಾ ಎನ್ನುವ ವಿವಾದವನ್ನು ಯಾರೂ ತೀರ್ಮಾನಿಸಿಕೊಳ್ಳಲಾಗದೇ ಹೋಗುತ್ತಿದ್ದಾರೆ. ನಾನು ಹಿಂದೂಗಳಿಗೆ ಭಗವದ್ಗೀತೆಯೇ ಮುಖ್ಯವೆಂದು ಹೇಳಿದರೂ, ಅದರಲ್ಲಿಯೇ ಕಲುಷಿತ ವಾಕ್ಯಗಳು ಕೆಲವು ಸೇರಿಕೊಂಡಿವೆ. ಅಷ್ಟೇ ಅಲ್ಲದೇ ವೇದಗಳು, ಪುರಾಣಗಳು ಗೀತೆಗೆ ಪೋಟಿಯಾಗಿ ನಿಂತಿವೆ. ಈ ವಿಧವಾಗಿ ಭಗವದ್ಗೀತೆಯಲ್ಲಿನ ಧರ್ಮಗಳು ಕಲ್ಪಿತ ಶ್ಲೋಕಗಳು, ವೇದಗಳು, ಪುರಾಣಗಳು ಎನ್ನುವ ಹುಳುಗಳಲ್ಲಿ ಸಿಲುಕಿಕೊಂಡ ಧಾನ್ಯದಂತೆ ತಯಾರಾಗಿವೆ.

ಬೈಬಲ್ ವಿಷಯಕ್ಕೆ ಬಂದರೆ ಪ್ರಭು ಹೇಳಿರುವವು ನಾಲ್ಕು ಸುವಾರ್ತೆಗಳೆ, ಆದರೆ ಹೆಚ್ಚಾಗಿ ಜೊತೆಯಾದ 62 ಸುವಾರ್ತೆಗಳಿರುವುದರಿಂದ, ಎಲ್ಲವೂ

ಬೈಬಲ್ ಅಂದುಕೊಂಡಿರುವುದರಿಂದ, ಪ್ರಭು ಹೇಳಿದ ನಾಲ್ಕು ಪಾಠಗಳು ಗುರುತಿಲ್ಲದವುಗಳಂತಾಗಿ ಹೋಗಿವೆ. ನಾವು ಬೈಬಲ್‌ನಲ್ಲಿನ 66 ಪಾಠಗಳಲ್ಲಿ ಕ್ರೈಸ್ತರಿಗೆ ಮುಖ್ಯವಾದವು, ಇಂದೂಧರ್ಮಗಳಿರುವವು, ಪ್ರಭು ಹೇಳಿದ ನಾಲ್ಕು ಸುವಾರ್ತೆಗಳೆಯೆಂದು ಹೇಳಿದರೂ, ಯಾವ ಕ್ರೈಸ್ತನೂ ಕೇಳುವ ಪರಿಸ್ಥಿತಿಯಲ್ಲಿಲ್ಲ. ಪ್ರಭು ಹೇಳಿದ ಮಾತುಗಳು ಪ್ರತಿಯೊಂದು ಶಾಸ್ತ್ರಬದ್ಧವಾಗಿದ್ದರೆ, ಶಾಸ್ತ್ರಬದ್ಧತೆಯಿಲ್ಲದ ಆದಿಕಾಂಡದಿಂದ ಬೈಬಲನ್ನು ಹೇಳುತ್ತಿದ್ದಾರೆ. ಆದಿಕಾಂಡದಲ್ಲಿ ದೇವರು ಪ್ರಪಂಚದಲ್ಲಿನ ಭೂಮಿಯನ್ನು, ಆಕಾಶವನ್ನು, ಸಮಸ್ತ ಜೀವರಾಶಿಗಳನ್ನು ಆರು ದಿನಗಳಲ್ಲಿ ಸೃಷ್ಠಿಸಿದ್ದಾನೆಂದು ಹೇಳುತ್ತಾ ಮತ್ತೊಂದು ಕಡೆ ಆದಾಮನನ್ನು ಸೃಷ್ಠಿಸಿದ್ದಾನೆಂದು, ಹವ್ವ ಆದಾಮನ ಮೂಳೆಯಿಂದ ಸೃಷ್ಠಿಸಲ್ಪಟ್ಟಿದೆಯೆಂದು, ಆದಾಮು ಹವ್ವದಿಂದ ಮನುಷ್ಯರು ಹುಟ್ಟಿಬಂದಿದ್ದಾರೆಂದು ಹೇಳುವುದು ನಡೆದಿದೆ. ಆದರೇ ಆ ಮಾತುಗಳನ್ನು ಡಿಗ್ರಿಗಳ ಓದು ಓದಿದವರು ಡಾಕ್ಟರ್ ಆಫ್ ಫಿಲಾಸಫಿ ಡಿಗ್ರಿ ಹೊಂದಿದವರು, ಮೇದಾವಿಗಳು ಮುಂತಾದವರೆಲ್ಲರೂ ಅದರಲ್ಲಿ ಶಾಸ್ತ್ರಬದ್ಧತೆ ಇದೆಯೊ ಇಲ್ಲವೊ ಎಂದು ನೋಡುವುದಿಲ್ಲ. ಶಾಸ್ತ್ರಬದ್ಧತೆಯಿರುವ ಪ್ರಭುವಿನ ಮಾತುಗಳನ್ನು ಶಾಸ್ತ್ರಬದ್ಧತೆಯಿಲ್ಲದ 62 ಪಾಠಗಳೊಳಗೆ ಸೇರಿಸಿದ್ದಾರೆ. ಬೈಬಲ್‌ನಲ್ಲಿ ಧರ್ಮಗಳು ಯಾವುವೊ, ಎಲ್ಲಿವೆಯೋ ತಿಳಿಯದ ಸ್ಥಿತಿಯಲ್ಲಿ ಅವರು ಇದ್ದಾರೆ. ಕೆಲವರಾದರೆ ಅವುಗಳಿಂದ (ಧರ್ಮಗಳಿಂದ) ಕೆಲಸವೇನು? ನಿತ್ಯವೂ ಬೈಬಲನ್ನು ಸ್ವಲ್ಪ ಓದಿಕೊಂಡು, ವಾರಕ್ಕೊಂದು ಬಾರಿ ಚರ್ಚಿಗೆ ಹೋಗಿ ಪ್ರಾರ್ಥನೆ ಮಾಡಿದರೆ ಅದಕ್ಕಿಂತ ಮೀರಿರುವುದೇನೂ ಇಲ್ಲ ಎನ್ನುತ್ತಾರೆ.

ಇನ್ನು ಇಸ್ಲಾಮ್‌ನೊಳಗೆ ಬಂದರೆ ಆ ಮತಕ್ಕೆ ದೇವರು ಒದಗಿಸಿದ ಪವಿತ್ರ ಖುರಾನ್ ಗ್ರಂಥವಿದೆ. ಖುರಾನ್ ಗ್ರಂಥವನ್ನು ಓದಿ ನೋಡಿದರೆ ಅದರಲ್ಲಿ ಎಂತಹ ಮೇಧಾವಿಗಳಾದರೂ ಅರ್ಥ ಮಾಡಿಕೊಳ್ಳುವಷ್ಟು ಜ್ಞಾನವಿದೆ. ಬುದ್ಧಿ ಕಡಿಮೆ ಇರುವವರು ಅದರಲ್ಲಿನ ಜ್ಞಾನವನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಲಾರರು. ಕೆಲವು ಕಡೆ ದೇವರು ಎದುರಿಗಿದ್ದು ಹೇಳಿದಂತಿದೆ. ಖುರಾನ್ ಗ್ರಂಥದಲ್ಲಿ ದೇವರ ಧರ್ಮಗಳು (ಇಂದೂ ಧರ್ಮಗಳು)

ಸಂಪೂರ್ಣವಾಗಿ ಇದ್ದರೂ, ಅವು ಸೂಕ್ಷ್ಮರೂಪವಾಗಿ (ಮುತಷಾಭಿಹತ್ ರೂಪವಾಗಿ) ಇರುವುದರಿಂದ ಮುಸ್ಲಿಮ್‌ರಲ್ಲಿ ನಾವು ಮೇಧಾವಿಗಳು ಎನ್ನುವವರು ಸಹ ಅವುಗಳ ಒಳಗಿನ ಭಾವಗಳನ್ನು ಅರ್ಥ ಮಾಡಿಕೊಳ್ಳಲಾರರೇನೋ ಎನಿಸುತ್ತದೆ. ಅಷ್ಟು ದೊಡ್ಡ ಖುರಾನ್ ಗ್ರಂಥವಿದ್ದರೂ, ಅದು ದೇವರು ಒದಗಿಸಿಕೊಟ್ಟ ಅಂತಿಮ ಗ್ರಂಥವೆಂದು ಅವರೇ ಹೇಳಿಕೊಳ್ಳುತ್ತಾ, ನಂತರ ಎರಡುನೂರು ವರ್ಷಗಳ ನಂತರ ಇಸ್ಲಾಮ್ ಪಂಡಿತರಾದ ಮನುಷ್ಯರು ಬರೆದ ಹದೀಸು ಗ್ರಂಥಗಳನ್ನು ಮುಸ್ಲಿಮ್‌ರು ಖುರಾನ್‌ಗೆ ಜೋಡಿಸಿಕೊಂಡು ಓದುವುದು ನಡೆಯುತ್ತಿದೆ. ಹಿಂದೆ ಬಂದವರೆಲ್ಲ ಖುರಾನ್ ಗ್ರಂಥದೊಂದಿಗೆ ಹದೀಸು ಗ್ರಂಥವನ್ನು ಸಮಾನವಾಗಿ ಗೌರವಿಸುತ್ತಿದ್ದಾರೆ. ಅದರಿಂದ ಅಂತಿಮ ಗ್ರಂಥವೆನ್ನುವ ಬೆಲೆ, ಮೊದಲು ತಯಾರಾದ ಖುರಾನ್‌ಗೆ ಕೊಡಬೇಕೊ ಅಥವಾ ಎರಡು ನೂರು ವರ್ಷಗಳ ನಂತರ ಜಿಬ್ರಾಯಿಲು ದೂತ ಹೇಳದ ಹದೀಸು ಗ್ರಂಥಕ್ಕೆ ಕೊಡಬೇಕೋ ಅರ್ಥವಾಗದೆ ಕೆಲವರು ಅಂತಿಮ ಗ್ರಂಥ ಖುರಾನ್ ಇರುವಾಗ ಹದೀಸು ಗ್ರಂಥವನ್ನು ಏಕೆ ಓದಬೇಕು ಎಂದು ನಮ್ಮನ್ನು ಕೇಳಿದವರು ಸಹ ಇದ್ದಾರೆ. ನಾವಾದರೆ ಸಂಪೂರ್ಣ ಧರ್ಮಗಳಿರುವ ಖುರಾನ್ ಗ್ರಂಥಕ್ಕೆ ಹೆಚ್ಚಿನ ಬೆಲೆಯನ್ನು ಕೊಡಿ ಎಂದು ಹೇಳಿದ್ದೇವೆ. ಕೆಲವರಾದರೆ ಖುರಾನ್ ಗ್ರಂಥಕ್ಕಿಂತ ಹಾದೀಸುಗಳೇ ಮುಖ್ಯವೆನ್ನುತ್ತಿದ್ದಾರೆ. ಆದ್ದರಿಂದ ಗಂಡಸರು ಹೆಚ್ಚು ಹದೀಸು ಗ್ರಂಥಗಳನ್ನು ಓದುತ್ತಿದ್ದಾರೆ. ಹೆಂಗಸರಿಗಾದರೇ ಖುರಾನ್ ಗ್ರಂಥವನ್ನು ಕೊಡುತ್ತಿದ್ದಾರೆ. ಖುರಾನ್ ಗ್ರಂಥ ಓದಿದ ಹುಡುಗಿಯನ್ನೇ ಮದುವೆಯಾಗೆಂದು ಕೆಲವರನ್ನುತ್ತಿದ್ದಾರೆ. ಮದುವೆಯಾಗದ ಮೊದಲು ಯುವಕರು ಖುರಾನ್ ಓದಬೇಕೆಂದುಕೊಳ್ಳುವುದಿಲ್ಲ. ಇದನ್ನು ಅನುಸರಿಸಿ ನೋಡಿದರೆ ಮದುವೆಯಾಗದ ಮೊದಲೇ ಗಂಡಸರಿಗಿಂತ ಹೆಂಗಸರೇ ಖುರಾನ್ ಓದುತ್ತಿದ್ದಾರೆ. ಆದರೂ ಅದರಲ್ಲಿನ ಆಯತ್‌ಗಳ ವಿವರ ಅವರಿಗೆ ತಿಳಿದಿಲ್ಲ. ಖುರಾನ್ ಗ್ರಂಥದಲ್ಲಿನ ಧರ್ಮಗಳು ಪೂರ್ತಿ ವಿವರವಾಗಿ ತಿಳಿಯದಿದ್ದರೂ, ಮುಸ್ಲಿಮ್‌ರೆಲ್ಲರೂ ದೇವರ ಮೇಲಿನ ವಿಶ್ವಾಸದಿಂದ ನಿತ್ಯವೂ ನಮಾಜ್ (ಪ್ರಾರ್ಥನೆ) ಮಾಡುತ್ತಿದ್ದಾರೆ. ಮುಸ್ಲಿಮ್‌ರನ್ನು ಪ್ರಾರ್ಥನೆವರೆಗೆ ಪರಿಮಿತಿ ಮಾಡಿದ ಮುಸ್ಲಿಮ್ ಹಿರಿಯರು,

ಖುರಾನ್ ಗ್ರಂಥದಲ್ಲಿನ ಮೂಲ ಧರ್ಮಗಳನ್ನು ತಾವು ತಿಳಿದುಕೊಂಡು, ಉಳಿದವರಿಗೆ ತಿಳಿಸಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ಕೆಲವು ಹಿರಿಯರು ನಮಗೆ ತಿಳಿದಿದೆ ಎನ್ನುವ ಭಾವನೆಯಲ್ಲಿ ಇರುವುದರಿಂದ, ತಿಳಿಯದ ರಹಸ್ಯಗಳು ಖುರಾನ್‌ನಲ್ಲಿ ಎಷ್ಟೋ ಉಳಿದಿವೆ.

ಈ ವಿಧವಾಗಿ ಎಲ್ಲ ಮತಗಳಲ್ಲಿನ ಮೂಲಗ್ರಂಥಗಳಿಗೆ ಪೋಟಿಯಾಗಿ ಆ ಮತದಲ್ಲಿಯೇ ಪಕ್ಕದ ಗ್ರಂಥಗಳಿರುವುದರಿಂದ, ಎಲ್ಲರೂ ಮೂಲ ಗ್ರಂಥಗಳ ಮೇಲೆ ಪೂರ್ತಿ ದೃಷ್ಟಿಯನ್ನಿಡದೇ ಹೋಗುತ್ತಿದ್ದಾರೆ. ಆದ್ದರಿಂದ ಗ್ರಂಥದಲ್ಲಿ ದೇವರು ನಿಗೂಢವಾಗಿ ಒದಗಿಸಿಕೊಟ್ಟ ಧರ್ಮಗಳು ತಿಳಿಯದಂತೆ ಹೋಗುತ್ತಿವೆ. ಹಾಗೆ ತಿಳಿಯದೆ ಹೋಗುವುದರಿಂದ ಎಲ್ಲ ಮತಗಳಲ್ಲಿ ದೇವರು ಹೇಳಿರುವುದು ಒಂದೇ ಧರ್ಮವೆಂದು ತಿಳಿಯದೆ, ಬೇರೆಬೇರೆ ಮತಗಳಿಗೆ ಬೇರೆಬೇರೆ ಧರ್ಮಗಳನ್ನು, ಬೇರೆಬೇರೆ ದೇವರು ಹೇಳಿದ್ದಾರೆಂದುಕೊಂಡಿದ್ದಾರೆ. ಆದ್ದರಿಂದ ಇಂದೂಶಕ್ತಿ (ದೈವಶಕ್ತಿ) ಯಾರಲ್ಲಿಯೂ ಇಲ್ಲದಂತೆ ಹೋಗಿದೆ. ಆ ಶಕ್ತಿ ಇಲ್ಲದೇ ಯಾವನೂ ಯೋಗಿಯಾಗುವುದಿಲ್ಲ. ಯಾವ ರೋಗಿಯನ್ನು ಆದರಿಸಲಾರನು. ಯಾವ ಮತದಲ್ಲಿನ ಯೋಗಿಗಾದರೂ ದೈವಶಕ್ತಿ ಚಂದ್ರ ಗ್ರಹದಿಂದಲೇ ಬರಬೇಕೆಂದು ನೆನಪಿಟ್ಟುಕೊಳ್ಳಿ. ಅಂತಹ ಶಕ್ತಿಯನ್ನು ಚಂದ್ರಶಕ್ತಿ ಅಥವಾ ಇಂದೂಶಕ್ತಿ ಎನ್ನುತ್ತಿದ್ದೇವೆ. ಇಂದೂಶಕ್ತಿ ಬರಬೇಕೆಂದರೆ ಯಾವ ಮತಸ್ಥನಿಗಾದರೂ ಅವರ ಮೂಲ ಗ್ರಂಥದಲ್ಲಿನ ಧರ್ಮಗಳು ತಿಳಿದು, ಅವುಗಳ ಪ್ರಕಾರ ಆಚರಿಸಬೇಕು. ಆಗಲೇ ಯಾವ ಮನುಷ್ಯನಾದರೂ ಯೋಗಿ ಆಗುವನು. ಆದರೇ ಯೋಗಿಗಳು ಕಾಣಿಸುವುದೇ ಅಪರೂಪವಾಗಿದೆಯೆಂದು ಮೊದಲೇ ಹೇಳಿಕೊಂಡಿದ್ದೇವೆ. ನಾವು ದೊಡ್ಡವರು ಅಂದುಕೊಂಡವರಿಗೆ ಕನಿಷ್ಠ ನಮ್ಮ ಗ್ರಂಥಗಳಲ್ಲಿ, ಒಂದು ಚಿಕ್ಕ ಗ್ರಂಥಕ್ಕಿರುವ ಶಕ್ತಿಯೂ ಸಹ ಇಲ್ಲದಂತೆ ಹೋಗಿದೆ. ಒಂದು ಗ್ರಂಥ ರೋಗಿ ಹತ್ತಿರಕ್ಕೆ ಹೋದರೇ ಅದು ಪ್ರತ್ಯಕ್ಷವಾಗಿ ಮಾಡಿದ ಮೇಲನ್ನು ಸಹ ಮನುಷ್ಯ ಜ್ಞಾನಿಯಾಗಿ ಯೋಗಶಕ್ತಿ ಹೊಂದಿ ರೋಗಿಗೆ ಮೇಲು ಮಾಡಲಾರದೆ ಹೋಗುತ್ತಿದ್ದಾನೆ.

ಸೃಷ್ಠಿ ಆದಿಯಲ್ಲಿ ಮನುಷ್ಯರಿಗೆ ಜ್ಞಾನವನ್ನು ತಿಳಿಸುವ ಸಲುವಾಗಿ ದೇವರು ಆಕಾಶದಲ್ಲಿನ ಸೂರ್ಯಗ್ರಹಕ್ಕೆ ತನ್ನ ಧರ್ಮಗಳನ್ನು ಜ್ಞಾನರೂಪವಾಗಿ ತಿಳಿಸಿದ್ದಾನೆ. ದೇವರಿಂದ ಮೊದಲು ಜ್ಞಾನವನ್ನು ಪಡೆದುಕೊಂಡ ಘನತೆ ಸೂರ್ಯನಿಗೆ ದಕ್ಕಿದೆ. ನಂತರ ಸೂರ್ಯನು ಭೂಮಿಮೇಲಿರುವ ಭಾರತದೇಶ ದಲ್ಲಿನ ಮನುವು ಎಂಬ ಮಹರ್ಷಿಗೆ ದೇವರ ಜ್ಞಾನವನ್ನು ತಿಳಿಸಿದನು. ಮನುವು ಸೂರ್ಯವಂಶದ ರಾಜನಾದ ಇಕ್ಷ್ವಾಕನೆಂಬ ದಕ್ಷಿಣ ದೇಶದಲ್ಲಿರುವ ರಾಜನಿಗೆ ತಿಳಿಸಿದನು. ಈ ವಿಧವಾಗಿ ಪ್ರಪಂಚದಲ್ಲಿ ಮೊದಲು ಭಾರತದೇಶಕ್ಕೂ, ನಂತರ ಅದರಲ್ಲಿನ ದಕ್ಷಿಣ ದೇಶಕ್ಕೂ ದೇವರ ಜ್ಞಾನ ಹಬ್ಬಿತು. ಇಕ್ಷ್ವಾಕನು ಇತರ ರಾಜರಿಗೆ ತಿಳಿಸಿದಾಗ, ಅವರು ತಮ್ಮ ತಮ್ಮ ಪ್ರಜೆಗಳಿಗೆ ತಿಳಿಸಿದಾಗ, ಜ್ಞಾನ ಭೂಮಂಡಲದಲ್ಲಿನ ಎಲ್ಲ ದೇಶಗಳಿಗೂ ಹಬ್ಬಿತು. ಕೃತಯುಗದಲ್ಲಿಯೇ ಜ್ಞಾನ ಪ್ರಪಂಚ ವ್ಯಾಪ್ತವಾಗಿ ತಿಳಿದುಹೋಯಿತು. ಆಗಿನ ಕಾಲದಲ್ಲಿ ಈದಿನ ಪ್ರತ್ಯೇಕ ದೇಶವಾಗಿರುವ ಲಂಕ ಭೂಭಾಗ ಭಾರತದೇಶದೊಂದಿಗೆ ಸೇರಿಕೊಂಡಿತ್ತು. ಭಾರತದೇಶದೊಂದಿಗೆ ಸೇರಿ ಭಾರತದೇಶದಲ್ಲಿ ಭಾಗವಾದರೂ, ಸುತ್ತಲೂ ನೀರಿರುವುದರಿಂದ ಆಗಾಗಲೇ ಲಂಕ ಎಂಬ ಹೆಸರಿತ್ತು. ದಕ್ಷಿಣ ಭಾರತದೇಶವಾದ ಲಂಕದಲ್ಲಿ ಇಕ್ಷ್ವಾಕನಿರುವುದರಿಂದ, ಲಂಕದಲ್ಲಿ ರಾಜನಾದ ಇಕ್ಷ್ವಾಕನಿಗೆ ದೇವರ ಜ್ಞಾನ ತಿಳಿದಿರುವುದರಿಂದ, ಮನುವು ಸಹ ಲಂಕದಲ್ಲಿ ಇಕ್ಷ್ವಾಕನ ಸಂರಕ್ಷಣೆಯಲ್ಲಿ ಇರುವುದರಿಂದ, ಮೊದಲು ಭೂಮಿ ಮೇಲೆ ದೇವರ ಜ್ಞಾನ ಸೇರಿದ ಭೂಮಿ ಲಂಕ. ಆದ್ದರಿಂದ ಲಂಕಗೆ "ಶ್ರೀ" ಎಂದು ಗೌರವಶಬ್ಧವನ್ನು ಸೇರಿಸುವುದು ನಡೆದಿದೆ. ಆಗಿನಿಂದ ಲಂಕ ಶ್ರೀಲಂಕವಾಗಿ ಬದಲಾಗಿದೆ. ಪ್ರಪಂಚಕ್ಕೆಲ್ಲಾ ಮೊದಲು ಜ್ಞಾನವಿರುವ ದೇಶ ಶ್ರೀಲಂಕ ಎಂದು ನಾವು ಹೇಳುವವರೆಗು ಯಾರಿಗೂ ಅದರ ವಿಷಯ ತಿಳಿದಿಲ್ಲ. ಯಾವ ದೇಶಕ್ಕೂ ಇಲ್ಲದ ಶ್ರೀ, ಲಂಕ ಒಂದಕ್ಕೆ ಏಕಿದೆಯೋ ಯಾರಿಗೂ ತಿಳಿದಿಲ್ಲ.

ಆ ರೀತಿ ಜ್ಞಾನ ಚರಿತ್ರೆ ಪ್ರಾರಂಭವಾದ ಶ್ರೀಲಂಕದಲ್ಲಿ ಪ್ರಪಂಚಕ್ಕೆಲ್ಲ ದೊಡ್ಡ ಜ್ಞಾನಿ, ದೊಡ್ಡ ಯೋಗಿ ಆದ ರಾವಣಬ್ರಹ್ಮ ಹುಟ್ಟಿದನು. ಆತನು

ಹುಟ್ಟದ ಮೊದಲೆ ಆತನು ಬಂದ ಯುಗದ ಹೆಸರು ತ್ರೈತಾಯುಗವೆಂದು ಹಿರಿಯರು ಇಟ್ಟಿದ್ದರು. ರಾವಣಬ್ರಹ್ಮ ಬಂದ ನಂತರ ತ್ರೈತಾಯುಗವನ್ನು ಅನುಸರಿಸಿ ದೇವರು ಸೂರ್ಯನಿಂದ ತಿಳಿಸಿದ ಮೂರು ಆತ್ಮಗಳ ಜ್ಞಾನವನ್ನು ತಿಳಿದುಕೊಂಡನು. ಮೂರು ಆತ್ಮಗಳ ತ್ರೈತ ಜ್ಞಾನವನ್ನು ತಿಳಿದಿರುವುದರಿಂದ, ಆತನು ಆ ಕಾಲದಲ್ಲಿಯೇ ತ್ರಿಕಾಲ ಜ್ಞಾನಿಯೆಂದು ಹೆಸರು ಪಡೆದುಕೊಂಡಿದ್ದನು. ತ್ರಿಕಾಲ ಜ್ಞಾನಿ ಎಂದರೆ ಮೂರು ಆತ್ಮಗಳ ಜ್ಞಾನವನ್ನು ತಿಳಿದವನೆಂದು ಅರ್ಥ. ತ್ರೈತಾಯುಗದಲ್ಲಿ ರಾವಣಬ್ರಹ್ಮ ಹುಟ್ಟಿ ತಾನು ತಿಳಿದುಕೊಂಡ ಜ್ಞಾನವನ್ನು ಎಲ್ಲ ದೇಶದವರಿಗು ವಿವರವಾಗಿ ತಿಳಿಯುವಂತೆ ಮಾಡಿದನು. ಆತನು ತಿಳಿದುಕೊಂಡ ಜ್ಞಾನದಲ್ಲಿ ಸ್ವಚ್ಛವಾದ ಇಂದೂಧರ್ಮಗಳಿರುವುದರಿಂದ ಆತನು ದೊಡ್ಡ ಇಂದೂ ಶಕ್ತಿಯಿರುವ (ದೈವಶಕ್ತಿಯಿರುವ) ಯೋಗಿಯಾಗಿ ಬದಲಾದನು. ಯೋಗಿ ಮಂತ್ರವನ್ನು ಮೂರು ಭಾಗಗಳಾಗಿ ಸೃಷ್ಠಿಸುತ್ತಾನೆಂದು **"ಮಂತ್ರ-ಮಹಿಮೆ"** ಗ್ರಂಥದಲ್ಲಿ ಹೇಳಿಕೊಂಡಂತೆ, ಆತನು ಯೋಗ ಶಕ್ತಿಯನ್ನು ಮಂತ್ರಶಕ್ತಿಯಾಗಿ ಬದಲಾಯಿಸಿ, ಪುಷ್ಪಕ ವಿಮಾನವನ್ನು ತಯಾರು ಮಾಡಿ, ಅದರಲ್ಲಿ ಎಲ್ಲಾ ದೇಶಗಳಿಗು ಪ್ರಯಾಣಿಸಿದ್ದಾನೆ. ಈ ವಿಧವಾಗಿ ದೈವಜ್ಞಾನಿಯಾದ ರಾವಣಬ್ರಹ್ಮ ಪ್ರಪಂಚ ವ್ಯಾಪ್ತವಾಗಿ ಜ್ಞಾನವನ್ನು ತಿಳಿಸಿದನು. ದೇವರು ಹೇಳಿದ ಮೂರು ಧರ್ಮಗಳನ್ನು, ನಾಲ್ಕು ಅಧರ್ಮಗಳನ್ನು ಆ ದಿನವೇ ಚೆನ್ನಾಗಿ ತಿಳಿದ ವ್ಯಕ್ತಿ ರಾವಣಬ್ರಹ್ಮ. ಅಧರ್ಮಗಳಲ್ಲಿ, ಯಜ್ಞಗಳು ಮಾಡುವುದು ಒಂದು ಅಧರ್ಮವಾಗಿ ಇರುವುದರಿಂದ, ಯಜ್ಞಗಳನ್ನು ಪೂರ್ತಿ ವಿರೋಧಿಸುತ್ತಿದ್ದನು. ಭಾರತದೇಶದಲ್ಲಿ ಯಜ್ಞಗಳನ್ನು ಮಾಡುವವರನ್ನು ದಂಡಿಸಿ ಅವರು ಮಾಡುವ ಯಜ್ಞಗಳನ್ನು ಭಂಗ ಮಾಡಿದಂತೆ ಚರಿತ್ರೆ ಇದೆ. ತ್ರೇತಾಯುಗದಲ್ಲಿ ರಾವಣಬ್ರಹ್ಮ ತ್ರೈತ ಜ್ಞಾನವನ್ನು ತ್ರಿಕಾಲ ಜ್ಞಾನಿಯಂತೆ ಪ್ರಚಾರಮಾಡಿ ಹೋಗಿದ್ದಾನೆ. ಆತನು ಹೋದ ನಂತರ ಕಾಲಕ್ರಮೇಣ ಪುನಃ ಅಜ್ಞಾನ ಜಾಗ ಮಾಡಿಕೊಳ್ಳುತ್ತಾ ಬಂದಿತು. ತ್ರೈತಾಯುಗ ಬದಲಾದ ಅಜ್ಞಾನದಿಂದ ತ್ರೇತಾಯುಗವಾಗಿ ಬದಲಾವಣೆ ಹೊಂದಿದೆ. ಈ ದಿನ ಎಲ್ಲರ ದೃಷ್ಟಿಯಲ್ಲಿ ತ್ರೈತಾಯುಗವಾಗಿ ಅಲ್ಲದೇ ತ್ರೇತಾಯುಗವಾಗಿ ಉಳಿದುಕೊಂಡಿದೆ.

ಕೃತಯುಗದಲ್ಲಿ ಇಕ್ಷ್ವಾಕನೆಂಬ ರಾಜನಿಂದ ಪ್ರಾರಂಭವಾದ ಜ್ಞಾನ ದೇಶವ್ಯಾಪ್ತವಾಗಿಯೇ ಅಲ್ಲದೇ ಪ್ರಪಂಚವ್ಯಾಪ್ತವಾಗಿ ಹರಡಿಕೊಂಡಿತು. ನಂತರ ತ್ರೈತಾಯುಗದಲ್ಲಿ ರಾವಣಬ್ರಹ್ಮ ಇಂದೂಧರ್ಮಗಳನ್ನು ಪ್ರಪಂಚವ್ಯಾಪ್ತವಾಗಿ ಪ್ರಚಾರ ಮಾಡಿದನು. ಆಗ ಆತನನ್ನು ಮೀರಿದ ಯೋಗಿ ಯಾರೂ ಇಲ್ಲ. ತಾನು ತಿಳಿದುಕೊಂಡ ಇಂದೂ ಧರ್ಮಗಳಿಗೆ ಗುರುತಿಗಾಗಿ ಲಂಕಕ್ಕೆ ಸಮೀಪದಲ್ಲಿರುವ ಲಂಕ ಕೆಳಗಡೆಯಿದ್ದ ಸಮುದ್ರಕ್ಕೆ ಇಂದೂಮಹಾಸಮುದ್ರವೆಂದು ನಾಮಕರಣ ಮಾಡಿದನು. ನನ್ನ ಮಾತು ನಿಜವೆನ್ನುವುದಕ್ಕೆ ಒಂದು ಆಧಾರವಿದೆ. ಪ್ರಪಂಚ ವ್ಯಾಪ್ತವಾಗಿರುವ ಸಮುದ್ರವನ್ನು ಐದು ಭಾಗಗಳಾಗಿ ವಿಭಜಿಸಿ ಹೆಸರುಗಳನ್ನು ಇಡುವುದು ನಡೆದಿದೆ. ಅದರಲ್ಲಿ 1) ಪೆಸಿಫಿಕ್ ಮಹಾಸಮುದ್ರ 2) ಅಟ್ಲಾಂಟಿಕ್ ಮಹಾಸಮುದ್ರ 3)ಅಂಟಾರ್ಕಿಟಿಕ್ ಮಹಾಸಮುದ್ರ 4) ಆರ್ಕಿಟಿಕ್ ಮಹಾಸಮುದ್ರ 5) ಇಂದೂ ಮಹಾಸಮುದ್ರ ಎಂದು ಅನ್ನುತ್ತೇವೆ. ಇಂದೂ ಮಹಾಸಮುದ್ರವನ್ನೇ ಇಂಡಿಯನ್ ಓಷನ್ ಎಂದು ಆಂಗ್ಲಭಾಷೆಯಲ್ಲಿ ಕರೆಯಲಾಗಿದೆ. ಈ ಐದು ಸಮುದ್ರಗಳಲ್ಲಿ ಒಂದೇ ಒಂದು ಸಮುದ್ರಕ್ಕೆ ದೇವರ ಧರ್ಮಗಳ ಹೆಸರು ಇಡಲಾಗಿದೆ. ಅದೇ ರಾವಣಬ್ರಹ್ಮ ಇಟ್ಟಿರುವ ಹೆಸರು ಇಂದೂ ಮಹಾಸಮುದ್ರ. ಇಂದೂ ಎಂಬ ಪದವನ್ನು ಇಂಗ್ಲೀಷ್ ಭಾಷೆಯಲ್ಲಿ ಇಂಡಿಯಾ ಎಂದು ಹೇಳುವುದು ನಡೆದಿದೆ. ತಿಳಿದಂತಹ ಹಿರಿಯರು ಗತಿಸಿಹೋಗಿ, ಅಜ್ಞಾನ ಮನುಷ್ಯರನ್ನು ಆವರಿಸಿಕೊಂಡು, ತ್ರೈತಾಯುಗ ತ್ರೇತಾಯುಗವಾಗಿ ಬದಲಾಗಿಹೋಗಿದೆ. ಹಾಗೇ ಇಂದೂ ಮಹಾಸಮುದ್ರದ ಹೆಸರು ಹಿಂದೂ ಮಹಾಸಮುದ್ರವಾಗಿ ಬದಲಾಗಿ ಹೋಗಿದೆ. ಒಂದು ಇಂದೂ ಮಹಾಸಮುದ್ರಕ್ಕೆ ಹೊರತು ಯಾವ ಸಮುದ್ರಕ್ಕೂ ದೇಶದ ಹೆಸರು ಇಲ್ಲ. ಪೂರ್ವದಲ್ಲಿ ಇಂದೂಗಳು(ಜ್ಞಾನಿಗಳು) ಇರುವ ದೇಶವೆಂದು ಪ್ರಪಂಚ ದೇಶಗಳಲ್ಲಿ ಭಾರತದೇಶ ಹೆಸರುವಾಸಿಯಾಗಿದ್ದರೇ ಈಗ ಆ ಹೆಸರು ಹಿಂದೂದೇಶವೆಂದು ಅರ್ಥವಿಲ್ಲದ ಹೆಸರಾಗಿದೆ. ಆ ದಿನ ಭಾರತದೇಶದಲ್ಲಿ ಒಂದು ಭಾಗವಾಗಿದ್ದ ಲಂಕ ಪುಣ್ಯದಿಂದ ಭಾರತದೇಶಕ್ಕೆ ಇಂದೂದೇಶವೆಂದು ಹೆಸರು ಬಂದಿದೆ. ಅಷ್ಟೇ ಅಲ್ಲದೇ ರಾವಣ ಬ್ರಹ್ಮ ಪುಣ್ಯದಿಂದ ನಮಗೆ

ಕೆಳಗಡೆ ದಕ್ಷಿಣ ದಿಕ್ಕಿನಲ್ಲಿರುವ ಸಮುದ್ರಕ್ಕೆ ಇಂದೂ ಮಹಾಸಮುದ್ರ ಎಂದು ಹೆಸರು ಬಂದರೆ, ಅದನ್ನು ಸಹ ಬೆಲೆ ತಿಳಿಯದಂತೆ ಹಿಂದೂ ಮಹಾ ಸಮುದ್ರವೆಂದು ಕರೆದುಕೊಳ್ಳುವುದು ಎಷ್ಟು ಅಜ್ಞಾನವೋ ಯಾರಿಗೂ ಅರ್ಥವಾಗಿಲ್ಲ. ಸಿಂಧೂನದಿಯಿಂದ ಹಿಂದೂ ಎಂಬ ಹೆಸರು ಬಂದಿದೆಯೆನ್ನುವವರು ಯಾವ ಸಮುದ್ರಕ್ಕೂ ದೇಶದ ಹೆಸರು ಬಾರದಿರುವಾಗ, ಲಂಕಕ್ಕೆ ಸಮೀಪದಲ್ಲಿರುವ ಸಮುದ್ರಕ್ಕೆ ದೇಶದ ಹೆಸರು ಹೇಗೆ ಬಂದಿದೆಯೆಂದು ಆಲೋಚಿಸಿದ್ದೀರ?

ಪ್ರಪಂಚ ವ್ಯಾಪ್ತವಾಗಿ ಇಂದೂದೇಶವೆಂದು ಹೆಸರು ಪಡೆದಿರುವುದು ಈಗಿನ ದಿನಗಳಲ್ಲಿ ಅಲ್ಲ ಮೊದಲಿನ ಯುಗಗಳಲ್ಲಿಯೇ ನಡೆದಿದೆ. ಆದಿನ ಈದಿನ ನಮ್ಮದು ಭಾರತದೇಶವೇ. ಆದರೇ ಇಂದೂ (ಜ್ಞಾನಿ) ಎನ್ನುವುದು ಈ ದೇಶಕ್ಕೆ ಬಂದ ಬಿರುದು ಅಥವಾ ಬಹುಮಾನಯೆಂದು ಹೇಳಬಹುದು. ಇಂದೂ ಎನ್ನುವುದು ದೇಶದ ಹೆಸರಲ್ಲ. ಇದು ಎಂದಿಗೂ ಭಾರತದೇಶವೇ. ಆದರೇ ಒಂದು ಕಾಲದಲ್ಲಿ ಇಂದೂದೇಶವೇ, ಈಗಿನ ಹಿಂದೂದೇಶ. ಪ್ರಪಂಚ ದೇಶಗಳಲ್ಲಿ ಯಾವ ದೇಶಕ್ಕೂ ಇಲ್ಲದ ಔಷಧ, ಮಂತ್ರ, ಮಾಟ (ಶಾಪ) ಶಕ್ತಿಗಳು ಈ ದೇಶದಲ್ಲಿ ಇದ್ದವು. ಪ್ರಪಂಚ ದೇಶಗಳಿಗೆಲ್ಲಾ ಜ್ಞಾನಶಕ್ತಿಯಿರುವ ದೇಶ ಇದು ಒಂದೇ. ತ್ರಿಕಾಲ ಜ್ಞಾನಿಯಾದ ರಾವಣಬ್ರಹ್ಮ ಸಮುದ್ರಕ್ಕೆ ಜ್ಞಾನ ಚಿಹ್ನೆಯಾಗಿ 'ಇಂದೂ' ಎಂದು ಹೆಸರಿಟ್ಟು, ಆತನು ಸತ್ತುಹೋದ ನಂತರವೂ ಸಹ ಆತನ ಆತ್ಮ ಶಕ್ತಿಯನ್ನು ಇಂದೂ ಸಮುದ್ರದಲ್ಲಿಯೇ ಇರುವಂತೆ ಮಾಡಿದನು. ಕೊನೆಗೆ ದೇಶದ ಹೆಸರು ಬದಲಾಯಿಸಿ ಹಿಂದೂ ಮಾಡಿ, ಸಮುದ್ರದ ಹೆಸರನ್ನು ಹಿಂದೂ ಮಾಡಿರುವುದರಿಂದ ಆ ರಾವಣಬ್ರಹ್ಮನ ಆತ್ಮಶಕ್ತಿ ಈ ಸಮುದ್ರವನ್ನೇ ಬಿಟ್ಟುಹೋಗಿ, ಅಮೆರಿಕಾ ಹತ್ತಿರವಿರುವ ಅಟ್ಲಾಂಟಿಕ್ ಮಹಾಸಮುದ್ರದಲ್ಲಿ ಸೇರಿ ಹೋಗಿದೆ. ಆ ದಿನ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ತ್ರೈತಜ್ಞಾನವನ್ನು ತಿಳಿದ ರಾವಣಬ್ರಹ್ಮನ ಆತ್ಮಶಕ್ತಿ ಅದೇ ತ್ರೈತಸಿದ್ಧಾಂತಕ್ಕೆ ಗುರುತಾಗಿ ಸಮುದ್ರದಲ್ಲಿ ಮೂರು ಕೋನಗಳ ಶಕ್ತಿಯಾಗಿ ವ್ಯಾಪಿಸಿ ಈಗಿನ ಬೆರ್ಮುಡಾ ಟ್ರಯಾಂಗಿಲ್

ಆಗಿ ಹೆಸರು ಪಡೆದಿದೆ. ಹಾಗೆ ಮೂರು ಆತ್ಮಗಳಿಗೆ ಗುರುತಾಗಿ ಮೂರು ಕೋನಗಳಾಗಿ ವ್ಯಾಪಿಸಿದ ಆತ್ಮಶಕ್ತಿ, ಮನುಷ್ಯರ ಅಜ್ಞಾನದ ಮೇಲೆ ಕೋಪವಿರುವುದಾಗಿ, ತನ್ನ ಪರಿಸರ ಪ್ರಾಂತದೊಳಗೆ ಹೋದವರನ್ನೆಲ್ಲಾ ಅಪಾಯಕ್ಕೆ ಗುರಿ ಮಾಡುತ್ತಿದೆ. ಕೆಲವರನ್ನು ದೈವಜ್ಞಾನ ತಿಳಿದುಕೊಳ್ಳುವುದಕ್ಕೆ ಇತರ ಗ್ರಹಗಳ ಮೇಲೆ ಕಳುಹಿಸುತ್ತದೆ.

ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಧರ್ಮಸಂಸ್ಥಾಪನಾರ್ಥವಾಗಿ ಬಂದ ಭಗವಂತನು ದ್ವಾಪರಯುಗದ ಕೊನೆಯಲ್ಲಿ ಭಗವದ್ಗೀತೆ ಮುಖಾಂತರ ಬೋಧಿಸಿ ಹೋಗಿದ್ದಾನೆ. ಭಗವದ್ಗೀತೆಯಲ್ಲಿ ದೇವರು ತನ್ನ ಧರ್ಮಗಳನ್ನು ತಿಳಿಸಿದ್ದಾನೆ. ಅವುಗಳೇ ಇಂದೂ ಧರ್ಮಗಳು. ಗೀತೆಯಲ್ಲಿ ಹೇಳಿದ ಮೂರು ಧರ್ಮಗಳು ಮನುಷ್ಯನವೊಂದು ಕರ್ಮವನ್ನು ಇಲ್ಲದಂತೆ ಮಾಡಿ ಮೋಕ್ಷವನ್ನು ಕಲ್ಪಿಸುವುದಕ್ಕೆ ನಿರ್ಣಯಿಸಲ್ಪಟ್ಟಿವೆ. ಗೀತೆಯಲ್ಲಿ ಬೋಧಿಸಿದ ಧರ್ಮಗಳ ಆಚರಣೆಗಳನ್ನು ಯೋಗಗಳೆಂದು ಅನ್ನುತ್ತೇವೆ. ಮೂರು ಧರ್ಮಗಳ ಆಚರಣೆಗಳು ಮೂರು ಯೋಗಗಳಾಗಿ ಇವೆ. ಅವು ಕ್ರಮವಾಗಿ ಕರ್ಮಯೋಗ, ಬ್ರಹ್ಮಯೋಗ, ಭಕ್ತಿಯೋಗವೆಂದು ಹೇಳಲಾಗಿದೆ. ಕರ್ಮಯೋಗವನ್ನು ರಾಜಯೋಗ ಎಂದೂ, ಬ್ರಹ್ಮಯೋಗವನ್ನು ಜ್ಞಾನಯೋಗವೆಂದು ಹೇಳಲಾಗಿದೆ. ಇನ್ನು ಪ್ರತ್ಯೇಕವಾದುದು ಭಕ್ತಿಯೋಗ. ಭಗವದ್ಗೀತೆಯಲ್ಲಿ ಮೂರು ಇಂದೂ ಧರ್ಮಗಳು ಇವೆ. ಬೈಬಲ್ ಗ್ರಂಥದೊಳಗೆ ಹೋಗಿ ನೋಡಿದರೆ ಗೀತೆಯಲ್ಲಿ ಹೇಳಿದ ಮೂರು ಧರ್ಮಗಳು ಇವೆ. ಖುರಾನ್ ಗ್ರಂಥದೊಳಗೆ ಹೋಗಿ ನೋಡಿದರೆ ಎರಡು ಧರ್ಮಗಳು ಕಾಣಿಸುತ್ತಿವೆ. ಬ್ರಹ್ಮಯೋಗ ಧರ್ಮವು ಕಾಣಿಸುತ್ತಿಲ್ಲ. ಯಾವ ಮತದಲ್ಲಾದರೂ ದೇವರು ಹೇಳಿದ ಒಂದು ಧರ್ಮವಿದ್ದರೂ ಅದರಿಂದ ದೇವರನ್ನು ಸೇರಬಹುದು, ಜನ್ಮಗಳನ್ನು ಜಯಿಸಬಹುದು. ಕೆಲವು ಮತಗಳಲ್ಲಿ ಒಂದೇ ಒಂದು ಭಕ್ತಿಯೋಗ ಕಾಣಿಸುತ್ತಿದೆ. ಮತ್ತೆ ಕೆಲವು ಮತಗಳಲ್ಲಿ ಮೂರು ಧರ್ಮಗಳಲ್ಲಿ ಒಂದು ಧರ್ಮವೂ ಸಹ ಇಲ್ಲದಂತೆ ಹೋಗಿದೆ. ಅಂತಹ ಧರ್ಮಗಳು ದೇವರ ಅನುಮತಿ ಇಲ್ಲದೇ, ಮನುಷ್ಯರು ತಮ್ಮ ಸ್ವಾರ್ಥಕ್ಕಾಗಿ ತಯಾರು ಮಾಡಿರುವವಾಗಿ

ಕಾಣಿಸುತ್ತಿವೆ. ಅಂತಹ ಮತಗಳಲ್ಲಿ ಅಧರ್ಮಗಳು ಮಾತ್ರ ಕೊರತೆ ಇಲ್ಲದಂತೆ ಇರುವವು. ಅವುಗಳಿಂದ ಮನುಷ್ಯನಿಗೆ ಯಾವ ಕರ್ಮ ಹೋಗುವುದಿಲ್ಲ. ಜನ್ಮರಾಹಿತ್ಯವೂ ಇಲ್ಲ.

ಮನುಷ್ಯನಿಗೆ ಧರ್ಮಗಳಿಂದ ಏನು ಅವಶ್ಯ ಎಂದು ಪ್ರಶ್ನಿಸಿಕೊಂಡು ನೋಡಿದರೇ ಮೊದಲು ಧರ್ಮಗಳು ಅವುಗಳ ಬೆಲೆ ತಿಳಿದರೆ ಅಲ್ಲವೇ! ಅವುಗಳ ಅವಶ್ಯ ಏಕೆಂದು ತಿಳಿಯುವುದು? ಸರಿ ಅವುಗಳ ಅವಶ್ಯ ನಮಗೆ ತಿಳಿದಿದೆ, ಆದ್ದರಿಂದ ನಾವು ಹೇಳಿಕೊಳ್ಳೋಣ. ಒಬ್ಬ ಮನುಷ್ಯ ಜನನ ಮರಣ ಚಕ್ರದಲ್ಲಿ ಸಿಲುಕಿಕೊಂಡು ಹೋಗಿ ಸಾಯುತ್ತಾ, ಹುಟ್ಟುತ್ತಾ ಪ್ರತಿ ಜನ್ಮದಲ್ಲಿಯೂ ಸ್ವರ್ಗ ಸುಖಗಳನ್ನು, ನರಕ ಬಾಧೆಗಳನ್ನು ಅನುಭವಿಸುತ್ತಾ ಕಾಲ ಕಳೆಯುತ್ತಿದ್ದಾನೆ. ಅಂತಹ ಕೆಲಸ ಇಲ್ಲದಿರುವುದಕ್ಕೆ ಕರ್ಮಗಳು ಅನುಭವಿಸದಂತೆ, ಸಾಯದಂತೆ, ಹುಟ್ಟದಂತೆ ಮೋಕ್ಷವನ್ನು ಹೊಂದಿ ಪ್ರಪಂಚಕ್ಕೇ ಅಧಿಪತಿಯಾದ ದೇವರಲ್ಲಿ ಸೇರಿಹೋಗುವುದಕ್ಕೆ ದೇವರ ಧರ್ಮಗಳಾದ ಇಂದೂ ಧರ್ಮಗಳು ಅವಶ್ಯ. ಅವುಗಳಲ್ಲಿ ಒಂದರಿಂದಾದರೂ ಕರ್ಮಗಳನ್ನು ಇಲ್ಲದಂತೆ ಮಾಡುವ ಯೋಗಿಯಂತೆ ಬದಲಾಗಿ, ಕರ್ಮಗಳೆಲ್ಲ ಇಲ್ಲದಂತೆ ಹೋದಾಗ ದೈವದೊಳಗೆ ಸೇರಿಹೋಗಬಹುದು. ದೇವರೊಳಗೆ ಸೆರಿಹೋದ ನಂತರ, ನೀನು ಬೇರೆ ದೇವರು ಬೇರೆ ಎನ್ನುವುದು ಇರುವುದಿಲ್ಲ. ಇಬ್ಬರೂ ಒಂದಾಗಿ ಹೋಗಿರುವು ದರಿಂದ ದೇವರು ಸೃಷ್ಟಿಗೆಲ್ಲಾ ಅಧಿಪತಿಯಾಗಿ ಇದ್ದಾನೆ ಆದ್ದರಿಂದ ನೀನೂ ಸಹ ಅದೇ ಸ್ಥಾನದಲ್ಲಿ ಇರಬಹುದು. ಐದು ವರ್ಷಗಳು ಮಂತ್ರಿಯಾಗಿದ್ದು, ಮಂತ್ರಿ ಸ್ಥಾನವನ್ನು ಅನುಭವಿಸುವುದಕ್ಕೆ ರಾಜಕೀಯದಲ್ಲಿ ಎಷ್ಟೋ ತಾಪತ್ರಯಪಡುವ ಮನುಷ್ಯ, ಪ್ರಪಂಚಕ್ಕೇ ದೊಡ್ಡದಾಗಿ ಶಾಶ್ವತವಾಗಿ ಇರುವ ಸ್ಥಾನಕ್ಕಾಗಿ ಎಳ್ಳಷ್ಟೂ ಪ್ರಯತ್ನ ಮಾಡುತ್ತಿಲ್ಲ. ಐದು ವರ್ಷಗಳೂ ಸಹ ಗ್ಯಾರಂಟಿ ಇಲ್ಲದ ಪದವಿಗೋಸ್ಕರ ಪ್ರಯತ್ನ ಮಾಡುವ ಮನುಷ್ಯ, ಶಾಶ್ವತವಾಗಿ ದೈವವಾಗಿ, ಪ್ರಪಂಚಕ್ಕೆ ಅಧಿಪತಿಯಾಗಿರುವ ಸ್ಥಾನಕ್ಕಾಗಿ ಏಕೆ ಪ್ರಯತ್ನ ಮಾಡುತ್ತಿಲ್ಲ ಎಂದರೆ! ದೇವರ ಧರ್ಮಗಳಿಂದಲೇ ದೇವರಾಗಿ ಬದಲಾಗಬಹುದೆಂದು, ಶಾಶ್ವತವಾಗಿ

ವಿಶ್ವಕ್ಕೇ ಅಧಿಪತಿಯಾಗಿ ಇರಬಹುದೆಂಬ ಸಮಾಚಾರ ಸ್ವಲ್ಪವಾದರೂ ಮನುಷ್ಯನಿಗೆ ತಿಳಿದಿಲ್ಲ. ಆದ್ದರಿಂದ ಅದಕ್ಕಾಗಿ ಯಾರೂ ಪ್ರಯತ್ನವೂ ಸಹ ಮಾಡುವುದಿಲ್ಲ. ಮನುಷ್ಯನಿಗೆ ದೈವತ್ವದವೊಂದು ವಿಷಯವೇ ತಿಳಿಯದಂತೆ ಹೋಗಿದೆ. ಭಕ್ತಿ, ಜ್ಞಾನ, ದೇವರು ಎಂದು ಯಾರಾದರೂ ಅನ್ನುತ್ತಿದ್ದಾನೆಂದರೆ ಅವನನ್ನು ಮಾಯೆ ತನ್ನ ಪರಧಿಯೊಳಗಿನಿಂದ ದಾಟದಂತೆ ಇಟ್ಟುಕೊಳ್ಳುತ್ತದೆ. ನಿಜವಾದ ಜ್ಞಾನದ ಮೇಲೆ, ದೈವದ ಮೇಲೆ ಆಸಕ್ತಿ, ಶ್ರದ್ಧೆಯಿರುವವನನ್ನು ಮಾತ್ರ ಮಾಯೆ ತನ್ನ ಅಧೀನದಿಂದ ಬಿಟ್ಟು ದೇವರ ಕಡೆ ಕಳುಹಿಸುತ್ತದೆ. ನಿಜವಾದ ಶ್ರದ್ದೆಯಿಲ್ಲದೇ ದೊಡ್ಡಸ್ತಿಕೆಗಾಗಿಯೊ, ಗೌರವಕ್ಕಾಗಿಯೊ ದೇವರು, ಜ್ಞಾನ ಎನ್ನುವವನು ಮಾಯೆ ಪ್ರಭಾವದಿಂದ ಮತದ ಬಲೆಯಲ್ಲಿ ಸಿಲುಕಿಕೊಂಡು, ಮತಕ್ಕಾಗಿಯೇ ಪ್ರಯತ್ನ ಮಾಡುತ್ತಾನೆ ಹೊರತು ದೇವರಿಗಾಗಿ ಪ್ರಯತ್ನಿಸುವುದಿಲ್ಲ. ಮತ ಎನ್ನುವ ಹೆಸರಿನಿಂದ ಮುಂದಕ್ಕೆ ಹೋಗುವವನು ನಾನು ಮಾಡುತ್ತಿರುವುದು ಸರಿಯಾದ ಕೆಲಸವೇನಾ? ಎಂದು ಹಿಂತಿರುಗಿ ನೋಡಿಕೊಳ್ಳುತ್ತಿಲ್ಲ. ಆದ್ದರಿಂದ ಇಂದೂಧರ್ಮ ಗಳೆಂದು ಕೇಳುತ್ತಲೇ ಹಿಂದೂವಾಗಿ ಇರುವವರೂ ಸಹ ಇದೇನೋ ಹೊಸ ಮತವೆಂದು ಅನ್ನುತ್ತಿದ್ದಾರೆ. ಇಂದೂತ್ವ ಎಂದರೆ ದೈವತ್ವವೆಂದು ತಿಳಿಯದೆ, ಮತದ ಮಾಯೆಯಲ್ಲಿ ಸಿಲುಕಿಕೊಂಡು ಹೋಗುತ್ತಿದ್ದಾರೆ. ಈಗಿನಿಂದಲಾದರೂ ದೇವರ ಮೇಲೆ ಶ್ರದ್ಧೆ ಇಟ್ಟು ಯಾವ ಮತದಲ್ಲಿರುವ ವನಾದರೂ, ಇಂದೂತ್ವವನ್ನು ತಿಳಿದುಕೊಂಡು ಇಂದೂವಾಗಿ ಬದುಕಿದರೆ, ಸತ್ತುಹೋದ ನಂತರ ಇಂದೂತ್ವ ದೊಳಗೆ (ದೈವತ್ವದೊಳಗೆ) ಸೇರಿ ಹೋಗಬಲ್ಲನು. ಗ್ರಹಿಸಿಕೊಳ್ಳುವವರಿಗೆ ಇದಕ್ಕಿಂತ ಹೆಚ್ಚಾಗಿ ಹೇಳಲಾರೆವು.

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ,**
**ಹಾಗೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

- ▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.
- ▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.
- ▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.
- ▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.
- ▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)
- ▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 09611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




## ಇಂದೂ ಜ್ಞಾನವೇದಿಕೆ (I.G.V)

(Regd.No.: 168/2004)


ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org


www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ

## ಸುವಾರ್ತ ಕ್ರೈಸ್ತವ ಸಂಘ (S.K.S)

**(Regd.No.: 159/2015)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

***www. suvarthakraisthavasangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ

ದ್ರಾವಿಡ ಶ್ರೇಷ್ಠಿ ಸಂಘ

ಮಧ್ಯಾತ್ಮ ವಾರ್ತಕನು

ಜೀವಿಯು ಶ್ರೇಷ್ಠಿ

ದೇವರು ಗುಪ್ತ

## ದ್ರಾವಿಡ ಶ್ರೇಷ್ಠಿ ಸಂಘ (D.S.S)

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),
ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381
e-mail id : info@dravidashreshtisangham.org

***www.dravidashreshtisangham.org***

# ಇಂದೂತ್ವವನ್ನು ಕಾಪಾಡೋಣ

## ಇಂದೂ (ಹಿಂದೂ) ಮತದಲ್ಲಿ ಸಿದ್ಧಾಂತಕರ್ತರು





Author :

The Only Guru of Three Religions

The Spiritual Emperor, Thraitha Theorem Originator

Sri Acharya Prabodhananda Yogeeshwarulu


www.thraithashakam.org